ಶ್ರೀ ಕೋರಿ ಸಿದ್ದೇಶ್ವರ ಪ್ರಕಾಶನದ ಮೊದಲನೇ ಪುಷ್ಪ

ನಾಲ್ವಾರದ

ಮಹಾತ್ಮಾ ಶ್ರೀ ಕೋರಿ ಸಿದ್ಧೇಶ್ವರ ಶಿವಯೋಗಿ

# ಪುರಾಣವು



ರಚಯಿತೃ :
...ಂ. ಸಿದ್ದಪ್ಪ ಶಾಸ್ತ್ರಿಗಳು, ತಿಮ್ಮನಗರ

ಪ್ರಕಾಶಕರು :
...ಠದ ಮಸ್ಕಿ ದೇಶಿಕ ಗಂಗಾಧರ ಸ್ವಾಮಿಗಳು

( ಬೆಲೆ: ೫ ರೂಪಾಯಿ )

ಶ್ರೀ ಕೋರಿ ಸಿದ್ದೇಶ್ವರ ಪ್ರಕಾಶನದ ಮೊದಲನೇ ಪುಷ್ಪ

ನಾಲ್ವಾರದ

# ಮಹಾತ್ಮಾ ಶ್ರೀ ಕೋರಿ ಸಿದ್ಧೇಶ್ವರ ಶಿವಯೋಗಿ

# ಪುರಾಣವು

ರಚಯಿತೃ :

ಶ್ರೀ ಪಂ. ಸಿದ್ದಪ್ಪ ಶಾಸ್ತ್ರಿಗಳು, ತಿಮ್ಮನಗರ

ಪ್ರಕಾಶಕರು :

ಕುನ್ನುಟಗಿ ಮಠದ ಮುಸ್ಕಿ ದೇಶಿಕ ಗಂಗಾಧರ ಸ್ವಾಮಿಗಳು

( ಬೆಲೆ: ೫ ,ರೂಪಾಯಿ )

ಪ್ರಕಾಶಕರು :
ಕುನ್ನುಟಗಿ ಮಠದ ಮಸ್ಕಿ ದೇಶಿಕ ಗಂಗಾಧರ ಸ್ವಾಮಿಗಳು
(ಶ್ರೀ ಕೋರಿ ಸಿದ್ಧೇಶ್ವರ ಟ್ರಸ್ಟ ಕಮೀಟಿಯ ಪರವಾಗಿ)



16-4-1970

೧೦೦೦ ಪ್ರತಿಗಳು



ಮುದ್ರಕರು :
ಬಿ. ಎಂ. ವೀರೇಶ್ವರ ಶಾಸ್ತ್ರಿ ವಿದ್ವಾನ್
ಅಮರವಾಣಿ ಮುದ್ರಣಾಲಯ, ಪಟೇಲ ರೋಡ,
ರಾ ಯ ಚೂ ರು.

ಪ್ರಕಾಶಕರು



ಮಸ್ಕಿ ಕುನ್ನುಟಿಗಿ ಮಠದ ದೇಶಿಕ ಶ್ರೀಗಂಗಾಧರಸ್ವಾಮಿಗಳು



ಶ್ರೀಗುರು ಸಿದ್ಧೇಶ್ವರ ಸ್ವಾಮಿಗಳವರು
ಶ್ರೀ ಕೋರಿಸಿದ್ಧೇಶ್ವರ ಮಠದ ಸಧ್ಯದ ಅಧಿಕಾರಿಗಳು.



೧ ೨ ೩

೧. ಶ್ರೀಗುರು ಸಿದ್ಧೇಶ್ವರ ತಾತನವರ ಗದ್ದಿಗೆ.

೨. ಶ್ರೀ ತೋಟೇಂದ್ರ ಮಹಾಸ್ವಾಮಿಗಳ ಗದ್ದಿಗೆ.

೩. ಶ್ರೀ ಶೀಲವಂತಮ್ಮನವರ ಗದ್ದಿಗೆ.



ಶ್ರೀ ಮುರಿಗೆಪ್ಪನವರ ಗದ್ದಿಗೆಯು



ಶ್ರೀ ಕೋರಿಸಿದ್ಧೇಶ್ವರ ರಥೋತ್ಸವ

ಮಿತಿ ವೈಶಾಖ ಶು॥ ೧



ಶ್ರೀ ಕೋರಿಸಿದ್ಧೇಶ್ವರ ಕರ್ತೃ ಗದ್ದಿಗೆಯ
ಮೊದಲನೆಯ ಮಂಟಪ



ಶ್ರೀ ಕೋರಿಸಿದ್ಧೇಶ್ವರ ರಥ

॥ ಓಂ ॥

ಶ್ರೀಮದ್ಗಿರಿರಾಜ ಸೂರ್ಯಸಿಂಹಾಸನಾಧೀಶ್ವರ
ಶ್ರೀ ೧೦೦೮ ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ
ಶಿವಾಚಾರ್ಯ ಮಹಾಸ್ವಾಮಿಗಳವರು
ಶ್ರೀ ಜಗದ್ಗುರು ಸೂರ್ಯಸಿಂಹಾಸನ ಮಠ, ಗುಂತಕಲ್ಲು ಇವರ

# ಃ ಮುನ್ನುಡಿ ಃ

ಶ್ರೀ ಕೋರಿಸಿದ್ಧೇಶ್ವರ ಶಿವಯೋಗಿ ಪುರಾಣವು ಭಕ್ತಿರಸಪೂರ್ಣ ವಾಗಿದೆ. ಪುರಾಣಕಾರರಾದ ಕೈ॥ ತಿಮ್ಮನಗರದ ಸಿದ್ದಪ್ಪ ಶಾಸ್ತ್ರಿಗಳು, ಪಂಡಿತ ರಲ್ಲದಿದ್ದರೂ ಸಿದ್ಧೇಶ್ವರನ ಕೃಪಾಲಬ್ಧ ಕವಿತಾಧಾಟಿಯಲ್ಲಿ ಕಾವ್ಯವನ್ನು ಅಂದವಾಗಿ ರಚಿಸಿದ್ದಾರೆ. ಪುರಾಣದ ಸರಣಿಯು ಸುಲಭವಾಗಿದೆ. ಸ್ವಾಭಾವಿಕವಾಗಿ ಎಲ್ಲರಿಗೂ ಈ ಕಾವ್ಯ ಅರ್ಥವಾಗುವುದರಿಂದ ಸಿದ್ಧೇಶ್ವರನ ಮಹಿಮಾವಳಿಯನ್ನು ಓದಿ ಸಂತೋಷಪಡಲು ಅನುಕೂಲವಾಗಿವೆ.

ಶ್ರೀ ಕೋರಿಸಿದ್ಧೇಶ್ವರ ಶಿವಯೋಗಿಗಳು ಶಿವಾವತಾರಿಗಳು, ಆಬಾಲಬ್ರಹ್ಮ ಚಾರಿಗಳು; ತಪಸ್ವಿಗಳು ಅದರ ಮೇಲೆ ಕ್ರಿಯಾಸಿದ್ಧರಾದ ಪವಾಡಪುರುಷ ರಾಗಿದ್ದರೆಂಬುದು ಈ ಕಾವ್ಯದಿಂದ ಸ್ಪಷ್ಟವಾಗುವುದಲ್ಲದೆ, ಸದ್ಯಃ ಅವರ ಮಠದಲ್ಲಿ ನಡೆಯುತ್ತಿರುವ ಗದ್ದಿಗೆಯ ಮಹಿಮೆ, ಜನರು ಸಲ್ಲಿಸುತ್ತಿರುವ ಸೇವೆ, ಅವರ ಮಹಿಮೋನ್ನತಿಗೆ ಸಾಕ್ಷಿ ಹೇಳುತ್ತವೆ.

ಇಂತಹ ಪವಾಡ ಪುರುಷರ ಅವತಾರವು ಜಗತ್ಕಲ್ಯಾಣಕ್ಕೋಸ್ಕರ ಮೀಸಲಾದುದು. ಒಬ್ಬ ಮಹಿಮರು ಒಂದೊಂದು ಪ್ರಾಂತದಲ್ಲಿ ಜನಿಸಿ ಆ ಪ್ರಾಂತದ ಸದ್ಭಕ್ತರ ಉದ್ಧಾರವನ್ನು ಜೀವಂತರಾಗಿರುವಾಗ ನಡೆಸಿರುವುದಲ್ಲದೆ ಶಿವೈಕ್ಯರಾದವೇಲೂ ನಡಿಸುತ್ತಿರುವುದು ಅವರ ಶಿವಯೋಗ ಮಹಿಮೆಯಲ್ಲದೆ ಬೇರೆಯಲ್ಲ. ಇಂತಹ ಪರೋಪಕಾರಿ ಪವಾಡ ಪುರುಷರ ಜೀವನಚರಿತ್ರೆಗಳು ಎಷ್ಟು ಪ್ರಕಟವಾದರೂ ಅಷ್ಟು ಜಗತ್ತಿಗೆ ಉಪಕಾರವಾಗುತ್ತದೆ. ನಾಲ್ವಾರ ಗ್ರಾಮವು ಇಂತಹ ಶಿವಶರಣರ ವಾಸಸ್ಥಾನದಿಂದ ಈಗ ಮಹಾ ಕ್ಷೇತ್ರವಾಗಿ ಪರಿಣಮಿಸಿದೆ

ಎಂಬುದು ಸ್ಪಷ್ಟವಾಗಿದೆ. ಶ್ರೀ ಕೋರಿಸಿದ್ಧೇಶ್ವರನ ಸದ್ಭಕ್ತ ಮಂಡಳಿಯವರು ಕನ್ನುಟಗಿ ಹಿರೇಮಠದ ಶ್ರೀ ಗಂಗಾಧರ ದೇಶಿಕರ ಸಲಹೆಮೇರೆಗೆ ಈ ಪುರಾಣ ಅಚ್ಚುಮಾಡಿಸಿ ಪ್ರಕಾಶಪಡಿಸಿರುವುದು ಶ್ರೀ ಶಿದ್ಧೇಶ್ವರನ ಭಕ್ತರಿಗಲ್ಲದೆ ಕರ್ನಾಟ ಎಲ್ಲಾ ಸಾಹಿತಿಗಳಿಗೂ ಮಹೋಪಕಾರವಾಗಿದೆ ಎಂಬುವಲ್ಲಿ ಸಂಶಯವಿಲ್ಲ.

ಈ ಪುರಾಣವನ್ನು ಸಕಲರೂ ಸದ್ಭಕ್ತಿಯಿಂದ ಓದಿ ಕೇಳಿ ಪ್ರಚಾರ ಶ್ರೀ ಶಿದ್ಧೇಶನ ಶುಭಾಶೀರ್ವಾದವನ್ನು ಪಡೆದು ಧನ್ಯರಾಗಬೇಕೆಂದು ಹಾರೈಸುತ್ತೇ

ಶ್ರೀ ಶೈಲ

ದಿನಾಂಕ 8–3–1970

ಇತ್ಯಾಶಿಷಃ

# ❁ ನಲ್ನುಡಿ ❁

ಬಯಲು ಮೂರ್ತಿಯಾಗಿ ನಿಂದನೊಬ್ಬ ಶರಣ
ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ
ಆತನ ಶಾಂತಿ ಸೈರಣೆಯಿಂದ ಹುಟ್ಟಿದಾತ ವಿಷ್ಣು
ಆತನ ಕೋಪದಿಂದ ಹುಟ್ಟಿದಾತ ರುದ್ರು
ಈ ಮೂರು ಪೀಠವಂತಿರಲಿ
ಈ ತತ್ವಗಳಿಗೆ ತಾನೆ ಕಾರಣವಾಗಿಪ್ಪ ಶರಣನ ನಿಲುವರಿದು
ಶರಣೆನುತಿರ್ದೆನು, ಕೂಡಲ ಸಂಗಮದೇವಾ.

ಶರಣರು ಸಂತರು ಜಗತ್ತಿನಲ್ಲಿ ಆಗಾಗ ಜನ್ಮ ತಾಳಿ ಜನತೆಯ ಉದ್ಧಾರ ಗೈಯ್ಯುತ್ತಿರುವರೆಂತಲೇ ಇನ್ನೂ ಜಗತ್ತಿನಲ್ಲಿ ಪಾಪ-ಪುಣ್ಯ, ಒಳಿತು-ಕೆಡುಕು, ಧರ್ಮ-ಅಧರ್ಮ ಈ ಮೊದಲಾದವುಗಳ ತಿಳುವಳಿಕೆ ಜನತೆಯ ಮನಸ್ಸಿನಲ್ಲಿ ಇನ್ನೂ ಉಳಿದುಕೊಂಡಿದೆ "ಶರಣ ಮೆಟ್ಟಿದ ಧರೆ ಪಾವನ"ವೆಂಬಂತೆ ಕೃಷ್ಣೆ-ಭೀಮೆಯರ ಸುತ್ತಲಿನ ನಾಡು ಅನೇಕ ಮಹಿಮಾ ಪುರುಷರು ಜನ್ಮವೆತ್ತಿ ಧರೆಯನ್ನು ಪಾವನ ಗೈದ ಪುಣ್ಯ ಬೀಡಾಗಿದೆ. ಇಂತಹ ಪುಣ್ಯ ಭೂಮಿಯಲ್ಲಿ ಜನ್ಮವೆತ್ತಿದ ಅನೇಕ ಮಹಿಮಾ ಪುರುಷರಲ್ಲಿ ಕೋರಿ ಶ್ರೀ ಸಿದ್ಧೇಶ್ವರ ಶಿವಯೋಗಿಗಳೂ ಒಬ್ಬರು.

ಸಿದ್ಧೇಶ್ವರ ಶಿವಯೋಗಿಗಳು ಮಹಾಮಹಿಮರಾದ ಕಲಬುರ್ಗಿ ಶ್ರೀ ಶರಣ ಬಸವೇಶ್ವರರಂತೆ ಅನೇಕ ಪವಾಡಗಳನ್ನು ಬೀರಿ, ಅನೇಕ ಕಲ್ಯಾಣ ಕಾರ್ಯ ಗಳನ್ನೆಸಗಿ ಪ್ರಖ್ಯಾತಿ ಪುರುಷರಾದರೂ. ಶರಣರು ಎಸಗಿದ ಪವಾಡಗಳು ಜಗದ ಹಿತಕ್ಕಾಗಿಯೆ ನಡೆದವುಗಳಾಗಿರುತ್ತವೆ. ಶಿವಯೋಗಿಗಳ ಯೋಗ ಸಾಧನೆಯಿಂದ ಸಿದ್ಧಿಸಿದ ಆತ್ಮಶಕ್ತಿಯ ಅಭಿವ್ಯಕ್ತಿಯೇ ಪವಾಡವೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳ ಬಹುದಾಗಿದೆ. ಅಂತೆಯೇ ಕಲಬುರ್ಗಿಯ ಶರಣರಂತೆ ಇವರೂ ಸಹ ದೀನದಲಿತರ ಕಷ್ಟ-ಕಾರ್ಪಣ್ಯಗಳನ್ನು ತಮ್ಮ ಪವಾಡದ ಅದ್ಭುತ ಶಕ್ತಿಯಿಂದ ನಿವಾರಣೆಗೊಳಿಸಿದರು.

ಇಂತಹ ಮಹಾಪುರುಷರ ಚರಿತ್ರೆಯು ಪುರಾಣರೂಪದಲ್ಲಿ ಪ್ರಕಟಗೊಂಡು ಸರ್ವರ ಶ್ರವಣಕ್ಕೆ ಉಪಯುಕ್ತವಾಗಲಿರುವದು ಸಂತೋಷದ ವಿಷಯ. ಈ ಪುರಾಣವನ್ನು ಶ್ರೀ ಶಿದ್ಧಪ್ಪ ಶಾಸ್ತ್ರಿಗಳು ಸರಳವಾದ ಶೈಲಿಯಲ್ಲಿ ಸಂಪ್ರದಾಯಕ್ಕೆ

ಬದ್ಧವಾಗಿ ಷಟ್ಪದಿಯಲ್ಲಿ ರಚಿಸಿದ್ದಾರೆ. ಈ ಪುರಾಣ ಕಾವ್ಯ ಈ ನಾಡಿಗೊಂದು ಯೋಗ್ಯ ಕಾಣಿಕೆ ಎಂದು ಹೇಳಬಹುದು ಕೆಲವೊಂದು ವಿಷಯ ನಿರೂಪಣೆಯಲ್ಲಿ ಕವಿಗಳ ಭಕ್ತಿಭಾವ ಅದೆಷ್ಟು ಅಪಾರವಾಗಿತ್ತೆಂಬುದನ್ನು ಅವರ ಮಾತಿನಲ್ಲಿಯೇ ಹೇಳಬೇಕಾದರೆ........

ಭಕ್ತರಿಗೆ ಭಕ್ತಿಯದೆ ಭೂಷಣ।
ಭಕ್ತಿಯುಕ್ತನೆ ಯೋಗ್ಯನೆನಿಸುವನು।
ಭಕ್ತಿಯುಕ್ತನು ಮಾಗದೆ ಮುಕ್ತಿಯು ದೊರೆಯದೆಂದು।
..........................................
..........................................
ಭಕ್ತಿಮಾರ್ಗವೇ ಶ್ರೇಷ್ಠವೆಂಬುವ।
ಭಕ್ತಿಯೇ ಸನ್ಮಾರ್ಗವೆಂಬುವ।
ಭಕ್ತಿಯೇ ಸ್ವರ್ಗಾಪವರ್ಗದಹೇತುವೆಂದೆನುವ।
........ ................................
..........................................
..........................................

ಕೊನೆಯದಾಗಿ 'ಸರ್ವರೂ ಕೋರಿ ಸಿದ್ಧೇಶ್ವರರಂತಹ ಶಿವಯೋಗಿಗಳ ಪಾವನ ಚರಿತ್ರೆಯನ್ನು ಈ ಪುರಾಣದ ಮೂಲಕ ಹೇಳಿಸಿ. ಕೇಳಿ ಪುನೀತರಾಗುವರೆಂದು ಹಾರೈಸುತ್ತೇನೆ.

ಶರಣನಗರ.
೧೫-೪-೧೯೭೦

ಪೂಜ್ಯ ಶ್ರೀ ಶರಣ ಬಸವಪ್ಪ ಅಪ್ಪ ಎಂ.ಎ.
ಶ್ರೀ ಶರಣಬಸವೇಶ್ವರ ಸಂಸ್ಥಾನ, ಕಲಬುರ್ಗಿ.

# ಪ್ರಸ್ತಾವನೆ

ಭಾರತವು ಸಾಧುಸಂತರ ಸುಕ್ಷೇತ್ರ, ಆಧ್ಯಾತ್ಮಿಕದ ಆವಾಸಭೂಮಿ ಸಿದ್ಧರ ಸ್ಥಾನ ಇಲ್ಲಿ ಹುಟ್ಟಿಬೆಳೆದು ಮಾನವ ಜನಾಂಗದ ಉದ್ಧಾರ ಮಾಡಿದ ಮಹಾಪುರುಷರು ಅಸಂಖ್ಯರು ಇಂತಹ ಪುಣ್ಯಭೂಮಿಯಲ್ಲಿ ಪ್ರತಿ ಶತಕಕ್ಕೂ ಮಹಾತ್ಮರು ಅವತರಿಸುತ್ತಿರುವರು.

ಭಾರತದ ಅಂಗವಾದ ನಮ್ಮ ಕನ್ನಡನಾಡಿನಲ್ಲಿಯೂ ಬಹುಜನ ಮಹಿಮಾ ಪುರುಷರಾಗಿರುವರು; ಮತ್ತು ಆಗುತ್ತಲಿರುವರು. ಅಂಥವರಲ್ಲಿ ೧೯ ನೇ ಶತಮಾನ ದಲ್ಲಿದ್ದ ಶ್ರೀ ಕೋರಿ ಸಿದ್ಧೇಶ್ವರ ಶಿವಯೋಗೀಶ್ವರರೂ ಒಬ್ಬರಾಗಿದ್ದಾರೆ. ಅವರ ಚರಿತ್ರೆಯೇ ಈ ಪುರಾಣವು.

ಈ ಪುರಾಣವನ್ನು ಬರೆದವರು ತಿಮ್ಮನಗರದ ಪಂ|| ಶಿದ್ಧಪ್ಪ ಶಾಸ್ತ್ರಿಗಳು ಪುರಾಣವನ್ನು ಮುದ್ರಣ ಮಾಡುವ ಸಂದರ್ಭವು ಒದಗಿದುದಕ್ಕೋಸ್ಕರವಾಗಿ ಮುಸ್ಕಿ ದೇಶಿಕ ಬ್ರ|| ಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳು ಸಂಶೋಧನೆ ಮಾಡಿ ತಿದ್ದಲಿಕ್ಕೆ ನನಗೆ ಒಪ್ಪಿಸಿದರು. ನಾನು ಸಾಧ್ಯವಿದ್ದಷ್ಟು ಸಂಶೋಧನೆಮಾಡಿ ತಿದ್ದಿ ಸಂಪಡಿಸಿರುತ್ತೇನೆ.

ಪುರಾಣದ ನಾಯಕರಾದ ಶ್ರೀ ಕೋರಿ ಶಿದ್ಧೇಶ್ವರ ಶಿವಯೋಗಿಗಳು ೧೯ ನೇ ಶತಮಾನದವರು. ಇವರು ತಿಮ್ಮನಗರದಲ್ಲಿ ಶಿವಲಿಂಗಾರ್ಯ-ಶಿವದೇವಿ ಎಂಬುವ ದಂಪತಿಗಳಿಗೆ ಪುತ್ರರಾಗಿ ಜನ್ಮಿಸಿದರು. ಇವರ ಬಾಲಸ್ವಭಾವವು ವಿಲಕ್ಷಣ ವಾದದ್ದು. ಬಾಲ್ಯದಲ್ಲಿ ವಿದ್ಯಾಭ್ಯಾಸವನ್ನು ಮಾಡಿ ವೀರಮಾಹೇಶ್ವರ ದೀಕ್ಷೆಯನ್ನು ಹೊಂದಿ ಸದಾಚಾರ ಸಂಪನ್ನರಾಗಿದ್ದರಲ್ಲದೆ ಶಿವಶರಣರ ವಚನಶಾಸ್ತ್ರದಲ್ಲಿಯೂ ಶಿವಾನುಭವ ವಿದ್ಯೆಯಲ್ಲಿಯೂ ವೀರಶೈವ ಮತ ತತ್ವ ಸಿದ್ಧಾಂತದಲ್ಲಿಯೂ ಅಗಾಧ ವಾದ ಪಾಂಡಿತ್ಯವನ್ನು ಸಂಪಾದಿಸಿದ್ದರು. ಶಿವಯೋಗಿಗಳು ನಾಡಿನಲ್ಲಿ ಸಂಚರಿಸಿ ತಮ್ಮ ಸದ್ಬೋಧೆಯಿಂದ ಭಕ್ತರ ಭಕ್ತಿಯನ್ನು ದೃಢಪಡಿಸುವದೇ ಮುಖ್ಯೋದ್ದೇಶ ವಾಗಿತ್ತು. ಇವರ ಸಮಕಾಲೀನರಾದ ಘನವೈರಾಗ್ಯ ಚಕ್ರವರ್ತಿಗಳಾದ ಅದ್ಭುತ ಪವಾಡ ಪುರುಷರಾದ ಘನಮಠದಪ್ಪನವರಿಗೂ ಇವರಿಗೂ ಸಂಭಾಷಣಾದಿಗಳು ನಡೆದುದು ಇವರ ಚರಿತ್ರೆಯಿಂದ ತಿಳಿದುಬರುತ್ತದೆ. ಶ್ರೀ ಕೋರಿ ಸಿದ್ಧೇಶ್ವರ ಶಿವ

ಯೋಗಿಗಳು ಅನಂತ ಮಹಿಮೆಗಳನ್ನು ಮಾಡಿದ್ದಾರೆ. ಆದರೆ ದೊರೆತಷ್ಟು ಮಹತ್ವಗಳನ್ನು ಮಾತ್ರ ಈ ಪುರಾಣದಲ್ಲಿ ಲಿಖಿಸಲಾಗಿದೆ.

ಇಂಥಾ ಮಹಾ ಮಹಿಮರ ಪುರಾಣವನ್ನು ತಿಮ್ಮನಗರದ ಪಂ. ಸಿದ್ಧಪ್ಪ ಶಾಸ್ತ್ರಿಗಳು ಬರೆದುದು ಸ್ತೋತ್ರಾರ್ಹವಾದುದು. ಇವರ ರಚನೆಯು ನಿರಾಡಂಬರವಾಗಿದೆ. ಪ್ರಾಚೀನ ಸಂಪ್ರದಾಯದಂತೆ ಪುರಾಣವನ್ನು ರಚಿಸಿರುತ್ತಾರೆ. ಇದರಲ್ಲಿ ಬಹು ಸ್ವಾರಸ್ಯವಾದ ನವೀನತೆಯನ್ನು ಕಾಣಬಹುದಾಗಿದೆ. ವರ್ಣನೆಯ ರೀತಿ ಭಾವ ಲಾಲಿತ್ಯ ಬಹು ಮನೋಹರವಾಗಿವೆ. ಇವರ ಪಾಂಡಿತ್ಯದ ಪ್ರಭಾವವು ಇಲ್ಲಿಯ ಕೆಲವು ಪದ್ಯಗಳ ಮೇಲಿಂದ ವ್ಯಕ್ತವಾಗುತ್ತದೆ. ಈ ಪುರಾಣವು ತಿಳಿಯಾದ ಕನ್ನಡದಲ್ಲಿ ಸುಲಭ ವೇದ್ಯವಾಗುವಂತೆ ರಚಿಸಲ್ಪಟ್ಟಿರುತ್ತದೆ. ಮಹಾ ಮಹಿಮ ಶ್ರೀ ಕೋರಿ ಸಿದ್ಧಲಿಂಗ ಶಿವಯೋಗೀಶ್ವರರ ಚರಿತ್ರೆಯನ್ನು ಈ ಪುರಾಣ ರೂಪದಲ್ಲಿ ರಚಿಸಿ ಶ್ರೀ ಸಿದ್ದಪ್ಪ ಶಾಸ್ತ್ರಿಗಳವರು ಕನ್ನಡಿಗರಿಗೆ ಮಹೋಪಕಾರವನ್ನು ಮಾಡಿದ್ದಾರೆ. ಶ್ರೀ ಮಸ್ಕಿ ದೇಶಿಕ ಗಂಗಾಧರ ಮಹಾಸ್ವಾಮಿಗಳವರು ಈ ಪುರಾಣವನ್ನು ಸಂಶೋಧನೆ ಮಾಡಿಸಿ, ಕೆಲವು ನಾಲ್ವಾರ ಭಕ್ತರ ಸಹಾಯ ಸಹಕಾರದಿಂದ ಮುದ್ರಣ ಮಾಡಿಸಿ ಪ್ರಕಾಶ ಪಡಿಸಿದುದು ಅವರಲ್ಲಿರತಕ್ಕ ವೀರಶೈವ ಮತಾಭಿಮಾನವನ್ನು ವ್ಯಕ್ತಗೊಳಿಸುತ್ತದೆ. ಪಂ. ಸಿದ್ಧಪ್ಪ ಶಾಸ್ತ್ರಿಗಳಿಂದ ಬರೆಯಲ್ಪಟ್ಟ ಈ ಪುರಾಣವು ಪ್ರತಿಯೊಬ್ಬ ವ್ಯಕ್ತಿಯ ಧಾರ್ಮಿಕ ಕೈಪಿಡಿಯಾಗಲೆಂದು ನನ್ನ ಹೆಬ್ಬಯಕೆ.

ಮಂಗಾಪುರ ಮಠದ ಪ್ಯಾಗೇರಿ
ವಿದ್ವಾನ್ ಕವೀಂದ್ರ ಚಂದ್ರಶೇಖರ ಶಾಸ್ತ್ರಿಗಳು
ಜೋ ೀ ತಿ ಪು ರ.

ರಾಯಚೂರು.
೧೧-೧೦-೧೯೬೬

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು

## ಶ್ರೀ ಶ್ರೀ ಕರಿಬಸವ ರಾಜೇಂದ್ರ ಮಹಾ ಸ್ವಾಮಿಗಳವರು

ಗವಿಮಠ ಉರವಕೊಂಡ ಇವರ

## ★ ಸಂದೇಶ ★

ಮಸ್ಕಿ ಗ್ರಾಮದ ಕುನ್ನುಟಗಿ ಹಿರೇಮಠದ ಶ್ರೀ ಗಂಗಾಧರ ದೇಶಿಕರು ನಮ್ಮ ಕೃಪಾನುಗ್ರಹಕ್ಕೆ ಪಾತ್ರರಾದ ಅತಿ ಶ್ರೇಷ್ಠ ಸಮಾಜ ಸೇವಾ ಪರಾಯಣರು. ಇವರು ಅಹರ್ನಿಶಿ ಸಮಾಜದ ಏಳ್ಗಿಗೆ ಶ್ರಮಿಸುವ ಕಾರಣದಿಂದ ನಾಲ್ವಾರ ಶ್ರೀ ಕೋರಿ ಸಿದ್ಧೇಶ್ವರ ಪುರಾಣ ಪ್ರಕಾಶಗೊಂಡಿದೆ.

ಮಹಾತ್ಮರು ಕನ್ನಡ ನಾಡಿನ ಎಲ್ಲ ಕಡೆಗೂ ಆಗಿಹೋಗಿದ್ದಾರೆ. ಆ ಪವಿತ್ರರ ಜೀವನಾದರ್ಶಗಳು ಜನತೆಗೆ ದಾರಿದೀಪಗಳಾಗಿ ಮಾನವನನ್ನು ಸನ್ಮಾರ್ಗದಲ್ಲಿ ನಡಿಸಲು ಸಹಾಯಕಗಳಾಗಿವೆ.

ಶ್ರೀ ಮಸ್ಕಿ ದೇಶಿಕರ ಈ ಸ್ತುತ್ಯ ಪ್ರಯತ್ನಕ್ಕೆ ಸನ್ನಿಧಿಯಲ್ಲಿ ಪರಿಪೂರ್ಣ ಆಶೀರ್ವಾದ ಬೆಂಬಲಗಳು ನಿರಂತರವಾಗಿ ಇವೆ.

ಇತ್ಯಾಶಿಷಃ

ಶ್ರೀ ಜಗದ್ಗುರು ಗವಿಮಠ
ಸಂಸ್ಥಾನ ಉರವಕೊಂಡ
೨೯-೮-೧೯೬೯

❁ ❁ ❁ ❁

ವೇದಾಂತಾಚಾರ್ಯ ವಿದ್ಯಾ ವಾಚಸ್ಪತಿ ಇತ್ಯಾದಿ ಬಿರುದಾಂಕಿತರಾದ

## ಶ್ರೀಮ. ನಿ. ಪ್ರ. ಸ್ವ. ಮೃತ್ಯುಂಜಯ ಮಹಾ ಸ್ವಾಮಿಗಳು

ಕಿರೀಟ ಮಠ ಸೋಲಾಪೂರ (ಗವಿಮಠ ಮುಧೋಳ)

ಇವರ

## :: ಆಶೀರ್ವಚನ ::

ಮಾನವನ ಜೀವನವು ಆನಂದಮಯವನ್ನು ಕಲ್ಯಾಣಮಯವನ್ನು ಉಂಟು ಮಾಡುವದೇ ಕಾವ್ಯದ ಹೆಗ್ಗುರಿಯು. ಕವಿಯು ಅದನ್ನು ಯಾವ ಛಂದಸ್ಸಿನಲ್ಲಿ

ಯೂ ಗದ್ಯ ಪದ್ಯಾತ್ಮಕವಾಗಿಯೂ ವಿರಚಿಸಿದರೂ ಸರಿಯು, ಆ ಉದ್ದೇಶವನ್ನು ಸಾಧಿಸಿದ ತಿಮ್ಮನಗರದ ಪಂ ಲಿಂ. ಶಿದ್ದಪ್ಪಶಾಸ್ತ್ರಿಗಳವರು, ನಾಲ್ವಾರ ಶ್ರೀ ಕೋರಿ ಸಿದ್ಧೇಶ್ವರ ಪುರಾಣವನ್ನು ಸರಸ, ಸುರಸ, ಸುಲಲಿತವಾಗಿ ವಿರಚಿಸಿ ಸರ್ವ ಸಾಮಾನ್ಯ ಜನರಿಗೆಲ್ಲ ಉಪಕಾರ ಮಾಡಿದ್ದಾರೆ. ಇತೋಪ್ಯತಿಶಯವಾಗಿ ಸಮಾಜ ಶೇವಾ ದುರಂಧರರಾದ ವಿಶಾಲ ಹೃದಯಿಗಳಾದ ದೇಶಿಕ ಶ್ರೀ ಗಂಗಾಧರ ಸ್ವಾಮಿಗಳು ಕುನ್ನುಟಗಿ ಮಠ ಮಸ್ಕಿ ಇವರು ಪರಿಶ್ರಮ ಪಟ್ಟು ಅಚ್ಚುಹಾಕಿಸಿದ್ದು ಸಮಾಜಕ್ಕೇನೆ ಉಪಕಾರ ಮಾಡಿದ್ದಾರೆ. ಇವರೆಲ್ಲರ ಪರಿಶ್ರಮಕ್ಕೆ ಫಲವಾಗಿ ಓದುಗರು ಓದಿ ಸಂತೋಷ ಪಟ್ಟದ್ದೇ ಫಲವು

ಸೋಲಾಪೂರ ಇತ್ಯಾಶಿಷಃ
೨೮-೮-೧೯೬೯

---

ಗದಗ ಶ್ರೀ ಜಗದ್ಗುರು ರೇಣುಕಾಚಾರ್ಯ ಮಂದಿರ ಸಂಸ್ಥಾಪಕರಾದ
## ಶ್ರೀಗುರು ಷ. ಬ್ರ. ಪಂ. ರೇವಣಸಿದ್ಧ ರಾಜೇಂದ್ರ ಶಿವಾಚಾರ್ಯ ಪಟ್ಟದ ಮಹಾಸ್ವಾಮಿಗಳು
ಗರುಸಂಸ್ಥಾನ ಬೃಹನ್ಮಠ ಚಿಕ್ಕಮಣ್ಣೂರು
ಇವರ

ನಾಲ್ವಾರದ ಶ್ರೀ ಕೋರಿ ಸಿದ್ಧೇಶ್ವರ ಮಠದ ಪುರಾಣಕ್ಕೆ
## ಬಿಂದೂರಾಭಿಃಪ್ರಾಯಮ್

ತಿಮ್ಮನಗರದ ಶ್ರೀ ಕೋರಿ ಸಿದ್ದಪ್ಪಶಾಸ್ತ್ರಿಗಳು ಸಿದ್ಧಾಂತ ಪರವಾಗಿ ಕನ್ನಡ ಸಾಹಿತ್ಯದಲ್ಲಿ ಸಮಸ್ತರಿಗೆ ತಿಳಿಯುವಂತೆ ಛಂದಸ್ಸು ಸರಿಯಾಗಿ ಈ ಪುರಾಣವನ್ನು ಹರಿದುಬಿದ್ದ ಮುತ್ತುಗಳನ್ನು ಸರಿಮಾಡಿ ಪೋಣಿಸಿದಂತೆ ಸರಳ ಶೈಲಿಯಲ್ಲಿ ಬಹು ಉತ್ತಮವಾಗಿ ಪುರಾಣ ರಚಿಸಿದ್ದಾರೆ.

ಈ ಪುರಾಣವು ಪಂಡಿತರು ಹೇಳುವದು ಸರಿಯೇ. ಸಾಧಾರಣ ಓದಿಕೊಂಡವರು ಸಹಿತ ಈ ಪುರಾಣ ಹೇಳಲಿಕ್ಕೆ ಬರುವಂತೆ ರಚಿಸಿ ಸಮಾಜಕ್ಕೆ ಮಹೋಪ

ಕಾರ ಮಾಡಿದ್ದಾರೆ. ಈ ಪುರಾಣವನ್ನು ಪುನರುಜ್ಜೀವನಗೊಳಿಸಿದ ಶ್ರೀ ವೇ|| ಮಸ್ಕಿ ದೇಶಿಕ ಗಂಗಾಧರ ಸ್ವಾಮಿಯವರು ಕುನ್ನೂಟಗಿ ಹಿರೇಮಠ ಇವರು ಉದಾರ ಹೃದಯದಿಂದ ಎಷ್ಟೋ ಶ್ರಮವಹಿಸಿ ನಾಲ್ವಾರ ಭಕ್ತರ ಧನಸಹಾಯದಿಂದ ಪ್ರಿಂಟುಮಾಡಿಸಿದ್ದು ಶ್ಲಾಘನೀಯವೇ ಸರಿ. ಈ ಪುರಾಣವನ್ನು ಪ್ರತಿಯೊಂದು ಗ್ರಾಮದವರು ಹಚ್ಚಿ ಸಮಾಜದಲ್ಲಿ ಸೂರ್ಯನಂತೆಬೆಳಗಲೆಂದು ಹೃತ್ಪೂರ್ವಕವಾಗಿ ಆಶಿಸುತ್ತೇವೆ.

|| ಶಿವಂಭೂಯಾತ್ ||

ಗದಗ ಕ್ಯಾಂಪ
೨೮-೮-೧೯೬೯

# .... ಅಭಿಪ್ರಾಯ ....

## "ನಾಲ್ವಾರ ಮಠದ ಶ್ರೀ ಕೋರಿ ಸಿದ್ಧೇಶ್ವರ ಪುರಾಣ"

ಕವಿಗಳು ತಿಮ್ಮಾನಗರದ ಶ್ರೀ ಲಿಂ. ಸಿದ್ದಪ್ಪ ಶಾಸ್ತ್ರಿಗಳು ಇವರ ಕೃತಿಯಾದ ಈ ಕಾವ್ಯವು ಸರಳ ರಚನೆಯಿಂದ ಕೂಡಿದ್ದು ಓದುಗರಿಗೆ ಕೇಳುವವರಿಗೆ ಹರುಷ ವನ್ನೀಯುವಂಥಾದ್ದಾಗಿದೆ ಕೇವಲ ಪಂಡಿತರಿಗಾನಂದವಾಗುವಂತೆ ಕೃತಿಯನ್ನು ರಚಿಸುವದಕ್ಕಿಂತಲೂ ಪಂಡಿತ ಪಾಮರರಿಗಾನಂದವಾಗುವಂತೆ ಕೃತಿಯನ್ನು ರಚಿಸುವದು ಬಹಳ ಅಮೋಘವಾದದ್ದು. ಯಾವ ಕಾವ್ಯದಲ್ಲಿಯೇ ಆಗಲಿ ದೋಷಗಳಿದ್ದೇ ಇರುತ್ತವೆ ಅವುಗಳನ್ನು ಓದುಗರು ಲಕ್ಷೀಕರಿಸದೆ ಈ ಕಾವ್ಯದಿಂದ ದೊರೆಯುವ ನೈತಿಕ, ಧಾರ್ಮಿಕ ವಿಚಾರಗಳಿಗೆ ಮಹತ್ವಕೊಟ್ಟು ಸರ್ವರೂ ಈ ಗ್ರಂಥವನ್ನು ಆದರಿಸಬೇಕು. ಓದಿ, ಪುರಾಣವನ್ನ ಕೇಳಿ, ಚರಿತ್ರ ನಾಯಕರಾದ ಶ್ರೀ ಕೋರಿ ಸಿದ್ಧೇಶ್ವರ ಶರಣರ ಆಚಾರ ವಿಚಾರಗಳನ್ನು ಅರಿತುಕೊಂಡು ಅದರಂತೆ ನಡೆದುಕೊಂಡರೆ ಈ ಗ್ರಂಥವನ್ನು ಶೋಧಿಸಿ ಬಹಳವಾಗಿ ಶ್ರಮಪಟ್ಟ ಮುದ್ರಣಗೊಳಿಸಿದ ಶ್ರೀ ಶಿವಮೂರ್ತಿ ಗಂಗಾಧರ ದೇಶಿಕೇಂದ್ರ ಮಹಾಸ್ವಾಮಿಗಳವರು ಮಸ್ಕಿ ಕುನ್ನೂಟಗಿ ಹಿರೇಮಠ ಅವರುಗಳ ಸಾಹಸವು ಸಾರ್ಥಕವಾಗುವದು. ಈ ಮಹಾಸ್ವಾಮಿಗಳವರು ಜನತೆಯ ಕಲ್ಯಾಣಕ್ಕಾಗಿ ಅನೇಕ ಸಾಮಾಜಿಕ ಧಾರ್ಮಿಕ, ಕಾರ್ಯಗಳನ್ನು ವಹಿಸಿಕೊಂಡು ಪರಿಶ್ರಮಿಸುವುದು ಸರ್ವ ಜನರಿಗೆ ವಿದಿತವಾದ

ವಿಷಯವೇ ಆಗಿದೆ. ಆ ಎಲ್ಲ ಪರಿಶ್ರಮಕ್ಕಿಂತಲೂ ಗ್ರಂಥ ಮುದ್ರಣ ಕಾರ್ಯವು ವಿಶೇಷ ಶ್ರಮದಾಯಕವೆಂದು ಹೇಳಬಹುದು. ಇಂಥವರು ಇಂಥ ಕಾರ್ಯಗಳನ್ನು ಮಾಡುವದರಿಂದಲೇ ಧರ್ಮವು ಇಷ್ಟರ ಮಟ್ಟಿಗಾದರೂ ಉಳಿದುಕೊಂಡಿದೆ. ಇವರ ಸಾಹಸಕ್ಕೆ ಶ್ರೀ ಜಗದ್ಗುರು ಪಂಚಾಚಾರ್ಯರು ಹಾಗೂ ಬಸವಾದಿ ಪ್ರಮಥರೂ ಯಶಸ್ಸನ್ನೂ ಶ್ರೇಯೋಭಿವೃದ್ಧಿಯನ್ನೂ ಈಯಲೆಂದು ಪ್ರಾರ್ಥಿಸುವದಲ್ಲದೆ ಈ ಮಹಾ ಗ್ರಂಥದಲ್ಲಿ ಅಲ್ಪನಾದ ನನ್ನ ಲೇಖನಕ್ಕೆ ಅವಕಾಶ ಮಾಡಿ ಕೊಟ್ಟದ್ದಕ್ಕಾಗಿ ಶ್ರೀ ಗಂಗಾಧರ ದೇಶಿಕೇಂದ್ರ ಸ್ವಾಮಿಗಳವರಿಗೆ ವಂದನೆಯನ್ನು ಸಮರ್ಪಿಸಿ, ಲೋಕಕ್ಕೆಲ್ಲ ಸನ್ಮಂಗಲವನ್ನು ಜಗದೀಶನಲ್ಲಿ ಪ್ರಾರ್ಥಿಸಿ, ಈ ಅಭಿಪ್ರಾಯ ಸೂಚಕ ಲೇಖನಕ್ಕೆ ವಿರಾಮವೀಯಲಾಗುವದು.

॥ ಸರ್ವಂ ಭದ್ರಂ ಭಯಾತ್ ॥

ಗುರು ಲಿಂಗ ಜಂಗಮ ಭಕ್ತ ವಿಧೇಯ
ತ್ರಿಭಾಷಾ ಕವಿ ಉಭಯ ಗಾಯನ ವಿಶಾರದ
ಜ ನ್ಮಾಂ ಧ ರಾ ದ
ಶ್ರೀ ಪಂ. ಪುಟ್ಟರಾಜ ಕವಿ, ಗವಾಯಿಗಳು.

ವೀರೇಶ್ವರ ಪುಣ್ಯಾಶ್ರಮ,
ಗ ದ ಗ.
೨೯-೮-೧೯೬೯

# ಪ್ರಕಾಶಕರ ನಾಲ್ಕು ಮಾತುಗಳು

ನಾಲ್ವಾರ ಮಠದ ಶ್ರೀ ಕೋರಿಸಿದ್ಧೇಶ್ವರ ಪುರಾಣ ಪ್ರಕಟನೆಗೆ ಸಂಬಂಧಿಸಿದ ನಾಲ್ಕು ಮಾತುಗಳನ್ನು ಬರೆಯಲು ನಮಗೆ ಬಹಳ ಸಂತೋಷವೆನಿಸುತ್ತದೆ.

ಶ್ರೀ ಕೋರಿ ಸಿದ್ಧೇಶ್ವರರು ಮಹಾ ಮಹಿಮರು ಪವಾಡ ಪುರುಷರು. ಈಗಲೂ ಅವರ ಪವಾಡಗಳು ಭಕ್ತರ ಮನದಲ್ಲಿ ಬಿಂಬಿಸಿ ಕೃತಾರ್ಥರನ್ನಾಗಿ ಮಾಡುತ್ತವೆ. ಇಂಥಾ ಮಹಾ ಮಹಿಮರ ಪುರಾಣಗಳು ಭಕ್ತರಿಗೆ ಮಾರ್ಗದರ್ಶನವಾಗಲೆಂಬ ಸದುದ್ದೇಶದಿಂದ ನಾಲ್ವಾರದ ಶ್ರೀ ವೇ॥ ಶಿದ್ದಯ್ಯಸ್ವಾಮಿಗಳು ಮುನೆಯ್ಯಗೋಳ ಮತ್ತು ಶ್ರೀ ಡಾಕ್ಟರ ಬಿ. ಕೆ. ಪ್ಯಾಟಿ ನಾಲ್ವಾರ ಇವರು, ಕೆಲವು ದಿನಗಳ ಹಿಂದೆ ತಿಮ್ಮನಗರದ (ತಿಮ್ಮಂಪೇಟೆ) ಪಂ. ಸಿದ್ದಪ್ಪ ಶಾಸ್ತ್ರಿಗಳಿಂದ ಬರೆಯಿಸಿ ಹಾಗೆಯೇ ಇಟ್ಟಿದ್ದರು, ನಾವುಗಳು ಭಕ್ತರ ಮನೋಭಿಷ್ಟದಂತೆ ಕುಲ್ಬುರ್ಗಿ ಜಿಲ್ಲೆಯ ಬಾಡ ಕೊಲ್ಲೂರು ಸ್ವಂತಿ ಮುಂತಾದ ಗ್ರಾಮಗಳಿಗೆ ದಯಮಾಡಿಸುತ್ತಿರಲು ಕೊಲ್ಲೂರಿನಲ್ಲಿ ಶ್ರೀ ಶಾಲೆ ಬಸವೇಶ್ವರ ಗುಡಿಯಲ್ಲಿ ಶ್ರಾವಣಮಾಸದ ಕಾರ್ಯಕ್ರಮವನ್ನು ನಡೆಯಿಸುತ್ತಿರಲು ಈ ಪುರಾಣದ ಪ್ರಸ್ತಾಪ ನಡೆದು ಶ್ರೀ ಕರಿಬಸಪ್ಪ ಸಾಹುಕಾರ ಬಿರಾಳ ಇವರ ಮುಖಾಂತರ ನಾಲ್ವಾರ ಸದ್ಭಕ್ತರಾದ ಶ್ರೀ ಬಸಣ್ಣ ಸಾಹುಕಾರ ಇಟಗಿ ಗುರನಗೌಡ ಬಾಸರಡ್ಡಿ, ವಾ॥ ಪಾ॥ ಸಿದ್ದರಾಜ, ಪೋ॥ ಪಾ॥ ಶೂಗೂರಪ್ಪಗೌಡ ಸಿದ್ದಣ್ಣ ಹೊತಪೇಟ, ಸಿದ್ಧರಾಮರಡ್ಡಿ ಹರಸರಡ್ಡಿ, ಪರಡ್ಡಿ ಸಾಹೇಬಗೌಡ, ಮೋಟಗಿ ಸಂಗಣ್ಣ ಸಾಹುಕಾರ, ಮಲಾಡ್ಡೆಪ್ಪ ಸೋಮರಡ್ಡಿ, ಯಂಕನಗೌಡ ಬಮ್ಮಣಿ, ಶರಣಪ್ಪ ಸಾಹು ಮಾಕಲ್, ತಮ್ಮನಗೌಡ ಮಾಡಿಗಿ, ಶರಣಪ್ಪ ಕರಡ್ಡಿ, ನಾರಾಯಣರಾವ ಪಟವಾರಿ, ಮದನಲಾಲಜಿ ತೋಶನವಾಳ, ಚಂದಪ್ಪ, ರಾಚೋಟೆಪ್ಪ ಸುಜ್ಞಾನಿ ಮುಂತಾದವರ ಪರಿಚಯವಾಗಿ ಇವರ ನಮ್ಮ ಗುರು-ಶಿಷ್ಯ ಸಂಬಂಧ ಬೆಳೆದು ಪುರಾಣ ಪ್ರಕಟನೆಗೆ ನಾಂದಿಯಾಯಿತು. ನಾವುಗಳು ನಾಲ್ವಾರದ ಶ್ರೀ ಕೋರಿಸಿದ್ಧೇಶ್ವರರ ಕ್ಷೇತಾಭಿವೃದ್ಧಿ ಮತ್ತು ಪುರಾಣ ಪ್ರಕಟನೆಗೆಂದು ಸ್ಥಳೀಯ ಮುಖಂಡರಿಂದೊಡಗೂಡಿದ ಒಂದು ಟ್ರಸ್ಟ ಕಮಿಟಿಯನ್ನು ಸ್ಥಾಪಿಸಿ ಪುರಾಣ ಮುದ್ರಣದ ಕಾರ್ಯವನ್ನು ಕೈಗೆತ್ತಿಕೊಂಡೆವು. ಪುರಾಣ ಪ್ರಕಟನೆಗೆ ಅನೇಕರು ಧನಸಹಾಯ ಮಾಡಿ ಸಹಕರಿಸಿದ್ದಾರೆ. ಅವರ ಹೆಸರುಗಳನ್ನು ಸಹ ಪ್ರಕಟಿಸಿದ್ದೇವೆ.

ಈ ಪ್ರಕಟನೆಗೆ ಶ್ರೀ ಸಿದ್ಧಯ್ಯಸ್ವಾಮಿ ಮುನೆಯ್ಯಗೋಳ ಮತ್ತು ಡಾ. ಬಿ.ಕೆ. ಪ್ಯಾಟಿ ಇವರು ಹೆಚ್ಚಾಗಿ ಶ್ರಮಿಸಿ ಸಫಲರಾಗಿದ್ದಾರೆ. ನಮ್ಮ ಬೇಡಿಕೆಯನ್ನು ಮನ್ನಿಸಿ ಶ್ರೀ ಮದ್ಗಿರಿರಾಜ ಸೂರ್ಯಸಿಂಹಾಸನಾದೀಶ್ವರ ಶ್ರೀ ೧೦೦೮ ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಮಹಾಸ್ವಾಮಿಗಳು ಮುದ್ದಾದ ಮುನ್ನುಡಿಯನ್ನು ಬರೆದುಕೊಟ್ಟಿದ್ದಾರಲ್ಲದೆ, ಕಲ್ಬುರ್ಗಿ ಶ್ರೀ ಶರಣಬಸವೇಶ್ವರ ಸಂಸ್ಥಾನದ ಅಧಿಪತಿ ಗಳಾದ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪಾ, ಎಂ.ಎ. ಅವರೂ ಮತ್ತು ಶ್ರೀ ಮ. ನಿ.ಪ್ರ.ಸ್ವ. ಜಗದ್ಗುರು ಉರವಕೊಂಡ ಕರಿಬಸವ ರಾಜೇಂದ್ರ ಮಹಾಸ್ವಾಮಿ ಗಳವರೂ, ಶ್ರೀ ಮ ನಿ. ಪ್ರ ಮೃತ್ಯುಂಜಯ ಮಹಾಸ್ವಾಮಿಗಳು ಕಿಂಟಿ ಮಠ ಸೋಲಾಪೂರ, ಶ್ರೀ ಷ. ಬ್ರ ಪಂ. ರೇವಣಸಿದ್ಧರಾಜೇಂದ್ರ ಶಿವಾ ಚಾರ್ಯರು ಬೃಹನ್ಮಠ ಚಿಕ್ಕಮಣ್ಣೂರು, ಉಭಯ ಗಾಯನ ವಿಶಾರದ ಶ್ರೀ ಪುಟ್ಟರಾಜ ಗವಾಯಿಗಳು, ವೀರೇಶ್ವರ ಪುಣ್ಯಾಶ್ರಮ ಗದಗ ಇವರೆಲ್ಲಗೂ ತಮ್ಮ ಅಭಿಪ್ರಾಯಗಳನ್ನು ಬರೆದು ಕಳಿಸಿದ್ದಾರೆ. ಈ ಮಹನೀಯರೆಲ್ಲರಿಗೂ ನನ್ನ ಕೃತಜ್ಞತಾಪೂರ್ವಕ ಅಭಿವಂದನೆಗಳು ಮತ್ತು ವೇ॥ ಪಂಡಿತ ಕವೀಂದ್ರ ಚಂದ್ರಶೇಖರ ಶಾಸ್ತ್ರಿಗಳು ಮ್ಯಾಗೇರಿ ಇವರು ಪ್ರಸ್ತಾವನೆಯನ್ನು ಬರೆದು ಕೊಟ್ಟಿದ್ದಾರಲ್ಲದೆ ಪುರಾಣವನ್ನು ಸಂಶೋಧಿಸಿ ಅಚ್ಚಿಗೆ ಅಣಿಮಾಡಿಕೊಟ್ಟಿದ್ದಾರೆ. ಅಮರವಾಣಿ ಮುದ್ರಣಾಲಯದ ಒಡೆಯರಾದ ಬಿ. ಎಂ. ವೀರೇಶ್ವರ ಶಾಸ್ತ್ರಿಗಳು ವಿದ್ವಾನ್ ರಾಯಚೂರು ಇವರು ಸಕಾಲಕ್ಕೆ ಮುದ್ರಣ ಮಾಡಿಕೊಟ್ಟಿದ್ದಾರೆ. ಈ ಮಹನೀಯರಿಗೂ ಮತ್ತು ಪುರಾಣ ಪ್ರಕಟನೆಯ ಕಾರ್ಯದಲ್ಲಿ ಸಹಕರಿಸಿ ತನು ಮನ ಧನದಿಂದ ಸಹಾಯಮಾಡಿದ ಮಹನೀಯರೆಲ್ಲರಿಗೂ ಶ್ರೀ ಕೋರಿ ಸಿದ್ಧೇಶ್ವರನು ಸದಾ ಸನ್ಮಂಗಲವನ್ನುಂಟು ಮಾಡಲೆಂದು ಹಾರೈಕೆ.

ತಮ್ಮ

ತಾ॥ ೧೬–೪–೧೯೭೦

ಕುನ್ನುಟಗಿ ಮಠದ

ಮಸ್ಕಿ ದೇಶಿಕ ಗಂಗಾಧರ ಸ್ವಾಮಿಗಳು

# :: ವಿಷಯಾನುಕ್ರಮಣಿಕೆ ::

ವಿಷಯ ಪುಟ

ವಿಷಯ | ಪುಟ

ಭಕ್ತಿಗೆ ಮೆಚ್ಚಿ ಕೋರಿ ಶಿದ್ಧೇಶ್ವರನು ವೇದಮೂಲವನ್ನು ಬೋಧಿಸಿ ಕೃತಾರ್ಥನನ್ನಾಗಿ ಮಾಡಿದ್ದು.

**ಸಂಧಿ— ೧೩.** ೧೫೫

ಕೋರಿ ಸಿದ್ಧೇಶ್ವರನು ತನ್ನ ಪಟ್ಟಾಧಿಕಾರವನ್ನು ತೋಟಪ್ಪಯ್ಯ ಸ್ವಾಮಿಗೆ ಕೊಟ್ಟು, ಆ ಮೇಲೆ ಬ್ರಹ್ಮವಿದ್ಯೆಯ ಮಹತ್ವವನ್ನು ತಿಳಿಸುವದು. ಮತ್ತು ರಾಜಾಸಾಹೇಬನಿಗೂ ಯೋಗದ ಮಹತ್ವವನ್ನು ತಿಳಿಸುವದು. ಮಾರಿಕಾ ದೇವಿಯು ಊರಲ್ಲಿ ಹರಡದಂತೆ ಗೈದುದು.

**ಸಂಧಿ— ೧೪.** ೧೬೪

ಭೇತಾಳ, ಪೈಶಾಚಗಳನ್ನು ಸ್ವಾಧೀನ ಮಾಡಿಕೊಂಡು ಜನಗಳಲ್ಲಿ ಡಂಭಾಚಾರದಿಂದ ವರ್ತಿಸುತ್ತಿರ್ದ ಟಿಂಗಳೆ ವಂಶದ ಸೀತಾರಾಮ ನೆಂಬುವನನ್ನು ನಿಗ್ರಹಿಸಿ, ಅವನಿಗೆ ಶಾಪವನ್ನು ಕೊಟ್ಟದ್ದು. ಮತ್ತು ವಿಷಹಾಕಿದುದನ್ನು ಜೈಸಿದ್ದು. ಘನಮಠೇಶರು ಕೋರಿ ಸಿದ್ಧೇಶ್ವರನ ದರ್ಶನಕ್ಕೆ ಆಗಮಿಸುವದು. ಮತ್ತು ಅವರಿಬ್ಬರಲ್ಲಿ ಪರಸ್ಪರ ಚರ್ಚೆಯು ನಡೆದದ್ದು.

**ಸಂಧಿ— ೧೫.** ೧೭೪

ಕೋರಿ ಸಿದ್ಧೇಶ್ವರನ ಉತ್ತರಾಧಿಕಾರಿಯಾದ ಪಟ್ಟಾಧ್ಯಕ್ಷ ತೋಟಪ್ಪಯ್ಯ ಸ್ವಾಮಿಗೆ ವೇದಾಂತವನ್ನು ಬೋಧಿಸಿ ತಾನು ಲಿಂಗದಲ್ಲಿ ಐಕ್ಯನಾಗುವದು. ನಂತರ ಕೆಲವು ದಿನದಮೇಲೆ ಗುಳ್ಯಾಳದ ಬಡಿಗರ ಭಕ್ತಗೆ ಶಿವಪುರದ ಸನುವರಗೆ, ನಾಲ್ವಾರ್ ಗ್ರಾಮದ ಗುರುಲಿಂಗಮ್ಮನಿಗೆ ತನ್ನ ದೇಹದಿಂದ ಪ್ರತ್ಯಕ್ಷನಾಗಿ ಅವರ ಬಯಕೆಯನ್ನು ಸಲಿಸಿದುದು. ಪುರಾಣ ಪ್ರಶಂಶೆ, ಕವಿಗಳ ಪ್ರಶಂಶೆ, ಮಂಗಲ ಇತ್ಯಾದಿ.

॥ ಶ್ರೀಗುರು ಸಿದ್ಧಲಿಂಗಾಯನಮಃ ॥







## ನಾಲ್ವಾರದ
## ಶ್ರೀ ಕೋರಿ ಸಿದ್ಧೇಶ್ವರ ಶಿವಯೋಗಿ

# * ಪುರಾಣವು *

**ಪೀಠಿಕಾ ಸಂಧಿ    ಭಾಮಿನೀ ಷಟ್ಪದಿ**

ಶ್ರೀವರಾರ್ಚಿತ ಪಾದ ಸುಮನಸ ।
ಪಾವನಾತ್ಮಕ ಭುಜಗ ಭೂಷನೆ ।
ಭಾವಜನ ಮದದೂರ ಶುಭಕರ ಶಂಭುಶಂಕರನೆ ॥
ಕೋವಿದಾಜನವನದಿ ಹಿಮಕರ ।
ಪಾವನಾಂಗ ಸುಲಿಂಗ ಶಿವನೇ ।
ದೇವ ದೇವನೆ ಕರುಣಿಸೆನ್ನಯ ಮತಿಗೆ ಮಂಗಲವಾ ॥ ೧ ॥

ಭಜಿಸುವೆನು ಭವರೋಗ ವೈದ್ಯಕ ।
ಭಜಿಸುವೆನು ಮೂಜಗದ ಜೀವಕ ।
ಭಜಿಸುವೆನು ಭವ್ಯಾತ್ಮ ಶಾಂಭವಿ ಸಿಂಹವಾಹಿನಿಯ ॥

ಭಜಿಸುವೆನು ಭಾರ್ಗವನಿಲೋಲಳ ।
ಭಜಿಸುವೆನು ಭುವನಾಳಿ ಪಾಲಳ ।
ಭಜಿಸಿ ಕೃತಿಯಂ ವಿರಚಿಸುವೆನಾ ಶಿವೆಯ ಕರುಣದಲಿ ॥ ೨ ॥

ಮತಿಯ ಪೂರ್ವಕ ಸ್ತುತಿಸುವೆನು ನಾ ।
ನತಿ ಮಹಾ ಸಂತೋಷದಿಂದಲಿ ।
ಪತಿತ ಪಾವನ ಚರಿತನಂ ಪಾಶಾಂಕುಶಾಧರನಂ ॥
ಕ್ಷಿತಿಯೊಳತಿಹಿತ ಭೂತಗಣಕೃತ ।
ಸತತ ಸೇವಿಸ ದೇವನನ್ನಯ ।
ಮತಿಗೆ ವಿಮಲತೆಯಿತ್ತು ಪೊರೆವುದು ಪಾರ್ವತೀ ತನುಜ ॥ ೩ ॥

ಹರನ ದೂಷಿಸಿ ದಕ್ಷಬ್ರಹ್ಮನು ।
ಹರಿಯಜಾದ್ಯರ ಕೂಡಿ ಯಜ್ಞವ ।
ವಿರಚಿಸಿದ ಮಹಗರ್ವಪೊಂದುತ ಮೂರ್ಖತನದಿಂದ ॥
ಪರಮ ಶಿವನಾ ಫಾಲನೇತ್ರದಿ ।
ಸುರಿವ ಬೆವರಿಂ ಉದಯವಾಗುತ ।
ಭರದಿ ದಕ್ಷನ ಶಿರವ ತರಿದಾ ವೀರಗಾಂಮಣಿವೆ ॥ ೪ ॥

ತಮೋಗುಣಾನ್ವಿತ ತಾರಕಾಸುರ ।
ಸುಮನಸಾದ್ಯರ ಶರೆಯೊಳಿಡುತಲಿ ।
ಕ್ರಮದೊಳಾಚರಿಸದಲೆ ಭೂಮಿಗೆ ಭಾರವಾಗಿರಲು ॥
ದ್ಯುಮಣಿ ಶತತೇಜದಲಿ ವುದಯಿಸಿ ।
ಅಮಿತರೋಷದೊಳಸುರನನು ಕೊಂ ।
ದಮರವಿಸರವ ಪೊರೆದ ಷಣ್ಮುಖದೇವನಾಂ ನುತಿಪೆ ॥ ೫ ॥

ಧರಣಿತಲದೊಳು ಯುಗಯುಗೆಂಗಳೊ ।
ಳ್ಪರಮ ಶಿವನಾಜ್ಞೆಯೊಳು ಮೆರೆವಾ ।
ಪರಮ ಶಿವಲಿಂಗಗಳೊಳುದಯಿಸಿ ವೀರಶೈವವನು ॥

ಇರದೆ ಸ್ಥಾಪಿಸಿ ತಿರೆಯ ಭಕ್ತರ ।
ನುರುತರದೊಳುದ್ಧಾರವೆಸಗಿದ ।
ವರಜಗದ್ಗುರು ಪಂಚಜಗದಾಚಾರ್ಯರಿಗೆ ಜಯತು ॥ ೬ ॥

ವಸುಧೆಯಿಂ ಧೀಂಕಿಟ್ಟು ಗಗನದೊ ।
ಳೆಸೆವ ಪಥದಿಂ ಚರಿಸುತಲಿ ಮನ ।
ನೊಸೆದು ಮಲಯಾಚಲಕಿಳಿಯುತಲ್ಲಿಪ್ಪಗಸ್ತ್ಯನಿಗೆ ॥
ಒಸಗೆಯಿಂ ಷಟ್‌ಸ್ಥಲದ ಶಾಸ್ತ್ರವ ।
ಬೆಸಸಿಯವನಿಂ ಪೂಜೆಗೊಳುತಲಿ ।
ಯಶವ ಸಂಪಾದಿಸಿದ ರೇಣುಕದೇವ ಕರುಣಿಪುದು ॥ ೭ ॥

ಪರಮ ಸುಂದರ ರೂಪದಿಂ ಬಂ ।
ಧುರ ಸುದೇಹದಿ ತಿರೆಯೊಳಗೆ ಸಂ ।
ಚರಿಸಿ ಪಾಮರ ಜನರನುದ್ಧಾರವನು ಗೈಯ್ಯುತ್ತಿ ॥
ಮರೆದು ಮನುವನು ತಿರುಗುತಿಪ್ಪರಿ ।
ಗಿರದೆ ಕರೆದೆಚ್ಚರಿಕೆ ಕೊಡುತಲಿ ।
ಕರುಣಭಾವವ ತೋರಿಯಡಗಿದ ಗುರುವೆ ಸಲಹೆನ್ನ ॥ ೮ ॥

ಧರೆಯೊಳಗೆ ಶ್ರೀವೀರಶೈವವ ।
ನುರತರದೊಳುದ್ಧಾರಗೈಯ್ಯಲು ।
ಹರುಷದಿಂದವತರಿಸಿದಾ ಪ್ರಭುದೇವ ಬಸವೇಶಾ ॥
ಪಿರಿದು ಜ್ಞಾನಿಸುಚನ್ನಬಸವಂ ।
ದೊರೆವಡೆದ ಶ್ರೀ ಸಿದ್ಧರಾಮಂ ।
ವರ ಪರಾಕ್ರಮಿ ಮಾಚಿದೇವಂ ಪೊರೆಗೆ ನಿರುತದೊಳು ॥ ೯ ॥

ಧಾರಿಣಿಯೊಳಾ ನೀಲಲೋಚನೆ ।
ಮೀರೆಸೆದ ನಾಗಾಂಬೆ ಮೋಕ್ಷ್ ಘನ ।
ವೀರವೈರಾಗ್ಯದೊಳು ರಾಜಿಸಿದಕ್ಕಮಹದೇವಿ ॥

ನಾರಿಮಣಿ ಸುಗ್ಗವ್ವೆ ಅಮ್ಮವೆ ।
ಸಾರ ಮುಕ್ತಾಯಕ್ಕ ಮೊದಲಾ ।
ದಾರವಿಯ ತೇಜದೊಳು ಬೆಳಗುವ ಶರಣೆಯರ ನುತಿಪೇಂ ॥ ೧೦

ನೆರೆಮೆರೆಯುವೀ ಕಾವ್ಯದಾದಿಯೊ ।
ಳ್ಪುರಕವಿಗಳಾಡಂಸುಹರಿಹರ ।
ಪರತರ ಶ್ರೀ ರಾಘವಾಂಕ ಸುಭೀಮ ಚಾಮರಸ ॥
ವರಷಡಕ್ಷರದೇವ ಮೊದಲಾ ।
ದುರುಕವಿಗಳಂ ಸ್ಮರಿಸಿರ್ನಂ ಘನ ।
ಹರುಷದಿಂದೀ ಕಾವ್ಯಮಂ ರಚಿಸುವೆನು ಮನನೊಲಿದು ॥ ೧೧।

ವಸುಧೆಯೊಳು ಭಕ್ತಿಯ ಘನತೆಯನು ।
ವೊಸೆದು ಪಸರಿಸಲುದಯಿಸುತೆ ತಾಂ ।
ಸಸಿನೆಯಿಂ ಗುರು ಲಿಂಗ ಜಂಗಮರವುಳ ಸೇವೆಯನು ॥
ಅಸಮತರದಿಂ ಗೈದು ಹರನೊಲು ।
ಎಸಗಿ ಪರಿಪರಿ ಘನ ಪವಾಡಗ ।
ಳೆಸೆವ ಕಲ್ಬುರುಗ್ಗಿಯ ಶರಣಬಸವೇಶಗೊಂದಿಪೆನು ॥ ೧೨।

ಪರಮ ಕನ್ನಡ ನಾಡಿನಲಿ ಮಿಗೆ ।
ಮೆರೆವ ನಾಲ್ವಾರದೊಳು ವಾಸಿಸಿ ।
ದೊರೆವಡೆದ ಶ್ರೀ ಕೋರಿ ಸಿದ್ಧೇಶ್ವರನ ಲೀಲೆಗಳ ॥
ಹರುಷದಿಂದೊರೆಯಲಿಕೆ ಯೆನ್ನಯ ।
ನಿರುಪಮದ ಶ್ರೀ ಇಷ್ಟಲಿಂಗವ ।
ನೆರೆಸ್ಮರಿಸಿ ಬೇಡುವೆನು ಸುಮತಿಯನಿತ್ತು ಪೊರೆಯೆಂದು ॥೧೩।

ಮೇದಿನಿಯೊಳತಿ ಮಹಿಮೆ ತೋರುತ ।
ಸಾಧು ನಿಚಯಕೆ ಹರುಷಗೊಡುತ ಸ ।
ಬೋಧವನು ಬೀರುತಲಿ ಜಗದೊಳು ಖ್ಯಾತಿಯಂ ಪಡೆದ ॥

ಭೇದಹರ ಶ್ರೀ ಕೋರಿ ಸಿದ್ಧನ ।
ಪಾದ ಪದ್ಮವ ಸ್ತುತಿಸುತಲಿ ನಾ ।
ವೋದದಿಂ ಬರೆಯುವೆನು ಯೀ ಮಹ ಶುಭಚರಿತ್ರವನು ॥ ೧೪ ॥

ಕೃತಿಯ ರಚಿಸಿದರಾರುಯೆಂದೆನೆ ।
ಕ್ಷಿತಿಯೊಳತಿ ಜಸವಾಂತು ಶೋಭಿಸಿ ।
ಮತಿಯುತರ ಗಡಣವನು ತನ್ನೊಳು ಕೂಡಿಕೊಂಡಿರುವ ॥
ಪತಿತ ಪಾವನ ತಿಮ್ಮನಗರ ।
ಸ್ಥಿತನುತಾ ಸಿದ್ದಪ್ಪ ಶಾಸ್ತ್ರಿಯು ।
ನುತಿಸಿ ಶ್ರೀಗುರು ಕೋರಿಸಿದ್ಧನ ಚರಿತೆಯನು ಬರೆದ ॥ ೧೫ ॥

ಸಿರಿದು ವೋದಿದ ವ್ಯಕ್ತಿ ನಾನ ।
ಲ್ಲರಿಯೆ ಹೆಚ್ಚಿಗೆ ವೋದದಿರ್ದಡು ।
ಪರಮ ಶಾಸ್ತ್ರವ ಬಲ್ಲವರ ಪಥದಲ್ಲಿಯೇ ನಡೆದ ॥
ಉರುಕತದೆ ಶಾಸ್ತ್ರಿಗಳು ಮೆಂದುಂ ।
ಕರೆದರಾ ಜನವಿತತಿಯೀ ಹೆಸ ।
ರಿರದೆ ಸಾರ್ಥಕಗೊಳಿಸಿಕೊಳಲಿಕೆ ಬರೆದ ನೀ ಕಾವ್ಯ ॥ ೧೬ ॥

ಚರಿತೆ ನಾಮವು ಕೋರಿ ಸಿದ್ಧೇ ।
ಶ್ವರ ಪುರಾಣಂ ಮತ್ತಮೀ ಶುಭ ।
ಚರಿತೆಗೊಡೆಯನು ನಿರುಪಮದ ಶ್ರೀ ಕೋರಿ ಸಿದ್ಧೇಶಂ ॥
ಚರಿತೆ ಪೇಳಿದ ವಿಬುಧರೊಪ್ಪುವ ।
ತೆರದಿ ಶ್ರೀ ಸಿದ್ಧಪ್ಪ ಶಾಸ್ತ್ರಿಯು ।
ಚರಿತೆಗಧಿದೈವತವು ಶ್ರೀ ಗುರು ಕೋರಿ ಸಿದ್ಧೇಶಂ ॥ ೧೭ ॥

ಖ್ಯಾತ ಮೇಘದ ಸ್ವಾತಿಹನಿಗಂ ।
ಚಾತಕವು ಬಾಯ್ದೆರೆದ ಪರಿಯೋಲ್ ।
ಕಾತರಿಸಿ ರವಿಯುದಯ ನೋಡುವ ಸರಸಿರುಹದಂತೆ ॥

ಪೂತ ಸಿದ್ಧೇಶ್ವರನ ಮಹಿಮೆಯ ।
ರೀತಿ ಭಕ್ತಿಯ ರಸದ ಸುಧೆಯ ।
ನ್ನೋತು ಬಯಸುವ ಶರದಿ ಭಕ್ತರಿಗೊರೆದ ಕವಿತೆಯಿದಂ ॥ ೧೮ ॥

ನಿರುತ ಸಜ್ಜನ ಹೃದಯದಂತರ ।
ದಿರುವ ಕರುಣಾಶರಧಿ ಚಂದಿರ ।
ಕಿರಣದರ್ಶನ ದುಬ್ಬಿದೋಲ್ವರ ಯತಿಯ ಚರಿತೆಯಿದು ॥
ಧರೆಯ ಜನರಘ ಕಳೆದು ಜ್ಞಾನದ ।
ಲಿರುವ ತಿಳಿರಸವೀಂಟಿದೊಡನಾ ।
ಪರತರಾನಂದೈಕ ಸದ್ಗತಿ ಪಡೆವನವ ಧಿಟದಿ ॥ ೧೯ ॥

ಕೃತಿಯು ಇದು ಸದ್ಗತಿಗೆ ಸಾಧನ ।
ಕೃತಿಯು ಯಿದು ಭೂಲೋಕ ಪಾವನ ।
ಕೃತಿಯು ಯಿದು ಮಹಿಮಾನಿ ಸಿದ್ಧಿಗೆ ಕಲ್ಪತರುವೆನಿಸಿ ॥
ಕೃತಿಯು ಯಿದು ಗರ ಸುಧೆಯ ಮಾಳ್ಪುದು ।
ಕೃತಿಯು ಯಿದು ಕಾಲಾಗ್ನಿ ತಣಿಪುದು ।
ಕೃತಿಯು ಸಿದ್ಧೇಶ್ವರನ ಮಹಿಮೆಯು ತಿಳಿದು ನುತಿಸರ್ಗೆ ॥ ೨೦ ॥

ಮೋಹ ಕಾಯದ ಕಾಂತಿ ಕಲ್ಮಷ ।
ದೇಹತನದಲ್ಲೆಂಬ ಜ್ಞಾನವ ।
ಸಾಹಸದಿ ನೆರೆ ತಿಳಿದು ಬ್ರಹ್ಮಾನಂದರೂಪಾಗಿ ॥
ತಾ ಹರುಷದಿಂದೈದೆ ಸಂಶಯ ।
ವಾಹಿನಿಯ ನೆರೆ ತುಳಿದು ಲೋಕದ ।
ಗೇಹ ಮಮತೆಯನುಡುಗಿದಾ ಸಿದ್ಧೇಶಗೆಣೆಯಾರು ॥ ೨೧ ॥

ಪರಮಶರದೀ ಯತಿಪುರಾಣವ ।
ನುರಮುದದೊಳೋದುವರಿಗಂ ಜೇ ।
ಳ್ವರಿಗೆ ಆಲಿಸುವರಿಗೆ ಸದ್ಗುರು ಕೋರಿ ಸಿದ್ಧೇಶಂ ॥

ಚಿರತರಾಯುರರೋಗ ವೈಸಿರಿ ।
ಪರಮ ವಿದ್ಯೆ ಸುಭಕ್ತಿ ಮೊದಲಾ ।
ಗಿರುವ ಸತ್ಫಲಗಳನು ಕರುಣಿಸುತಿರ್ಪನಿದು ದಿಟವು ॥ ೨೨ ॥

ಪೀಠಿಕಾ ಸಂಧಿ ಸಂಪೂರ್ಣಂ

ಪದ್ಯಗಳು ೨೨ ಕ್ಕಂ ಮಂಗಲಂ ಮಹಾ

ಶ್ರೀ ಶ್ರೀ ಶ್ರೀ

॥ ಶ್ರೀಗುರು ಕೋರಿ ಸಿದ್ಧೇಶ್ವರಾಯನಮಃ ॥



# ಎರಡನೆಯ ಸಂಧಿ

ಸೂಚನೆ– ಧರೆಯೊಳಿಪ್ಪರು ತಿಮ್ಮನಗರದಿ ।
ಪರಮ ಶಿವಲಿಂಗಾರ್ಯ ನೆಂಬ್ ಹರ ।
ಗುರುಭಕುತೆ ಶಿವದೇವಿಯೆಂಬುವ ದಂಪತಿಗಳೆಸೆದರ್ ॥

ನಾಗಭೂಷಣ ವೃಷಭವಾಹನ ।
ನಾಗಶಯನ ಸ್ತುತಿವಿರಾಜಿತ ।
ನಾಗಮುಖಮುಂ ತಳೆದ ಗಣಪತಿತಾತ ವಿಖ್ಯಾತ ॥
ರಾಗರಹಿತಂ ಭೋಗಭರಿತಂ ।
ಯೋಗಿಜನ ಹೃದಯಾಂತರಂಗಂ ।
ರಾಗದಿಂ ಪಾಲಿಪುದು ಸತತಂ ವರಮಹಾದೇವಾ ॥ ೧ ॥

ಈ ಕೃತಿಗೆ ಮೊದಲಾವುದೆನೆ ಮುಂ ।
ಡೂಕ ಮಾಘನಶಿಂಶುಮಾರಜ ।
ಲೂಕ ಕರ್ಕಾಟಕ ತಿಮಿಂಗಿಲ ತಿಮಿಯ ತಿಂತಿಣಿಯಿಂ ॥
ಭೀಕರಾಹಿಯ ನಿಕರದಿಂದಂ ।
ಆಕಮಠ ನೀರಾನೆಯಿಂದದ ।
ನೇಕ ಜಲಜಂತುಗಳತತಿಯಿಂ ಮೆರೆದುದಂಬುನಿಧಿ ॥ ೨ ॥

ಚಾರುರತ್ನಾಕರದ ಮಧ್ಯದಿ ।
ಮೇರು ಮೆರೆದಿತ್ಯುಜ್ವಲಿಸಿ ಗಂ ।
ಭೀರ ಖೇಚರ ಸಿದ್ಧ ಸುರಗಂಧರ್ವರಾಗೃಹದಿ ॥
ಭೂರಿ ವಜ್ರಶೃಂಗ ತುಂಗಗ ।
ಭೀರ ಪರುಷದ ಗಣಿಗಳಿಂದಲ ।
ಪಾರ ಸಿದ್ಧರಸಪ್ರವಾಹದಿ ಮೆರೆದುದೇನೆಂಬೆ ॥ ೩ ॥

ಆ ಗಿರಿಯೊಳಿಹನಂತ ದೇಶಗ ।
ಳೌಷುಕಪ್ರಧಾನ್ಯಮೆನಿಸುತ ।
ಶ್ರೀಗರಳಧರ ಧರ್ಮದಾರ್ಯಜನಂಗಳೋಲೈಸಿ ॥
ಯೋಗಿಗಳ ಜಪತಪಕೆ ತಾನೆಡೆ ।
ಯಾಗಿ ಸಕಲೈಶ್ವರ್ಯದೊಗ್ಗದ ।
ಪೂಗದಿಂದತಿ ರಮ್ಯಮೆನೆ ರಾಜಿಸಿತು ಭಾರತವು ॥ ೪ ॥

ಸಾರತರಯಶವಾಂತು ಮೆರೆವಾ ।
ಭಾರತದ ದಕ್ಷಿಣದ ದಿಶೆಯೋಳ್ ।
ಭಾರತಾಂಬೆಯ ಭಕ್ತಿದೇವಿಯು ಪುಟ್ಟಿದೆಡೆಯೆನಿಸಿ ॥
ಚಾರುತೆಯನೊಳಗೊಂಡು ಜನತೋ ।
ದ್ಧಾರ ಪರಕೃತಿಗೈವ ಸಜ್ಜನ ।
ವಾರಕಾಶ್ರಯನಾಗಿ ಕರ್ನಾಟಕವು ಬೆಳಗುವದು ॥ ೫ ॥

ಪರಮ ನಿಜಗುಣ ಸರ್ಪಭೂಷಣ ।
ನಿರಘ ಮುಪ್ಪಿನ ವರಷಡಕ್ಷರ ।
ಪಿರಿಸಿಡಿಲ್ನುಡಿ ನುಡಿದ ನುತ ಸರ್ವಜ್ಞ ಮೊದಲಾದ ॥
ಹರನ ನಿಲುಮೆಗೆ ಕುಂದು ಬರದೋಲ್ ।
ಪರಿಸಿ ದಿವ್ಯಜ್ಞಾನ ಗಂಗೆಯ ।
ಮೆರೆದ ಘನಶಿವಯೋಗಿವರರೀ ನಾಡೊಳೆಸೆದಿರ್ದರ್ ॥ ೬ ॥

ಕನ್ನಡದ ಸಾಹಿತ್ಯ ಸಂತಾ ।
ನೋನ್ನತಕೆ ವೆಳೆವೆಳೆದು ತನ್ನು ।
ತ್ಪನ್ನದಾ ಫಲದುಣಿಸುಗೊಟ್ಟುದರಿಂದ ಜಸವಾಂತ ॥
ರನ್ನ ರಾಘವ ಪಂಪ ಹರಿಹರ ।
ಜನ್ನ ಮಲ್ಲಣರಾದಿ ವರಕವಿ ।
ಮಾನ್ಯರೊರೆದರು ಮೇರು ಸತ್ಕೃತಿಗಳನು ಬಣಿತೆಯಲಿ ॥೭॥

ಇರ್ಪುದಾ ನಾಡೊಳಗೆ ಚನ್ನ ಪೆ ।
ಸರ್ಪಡೆದ ವರಗ್ರಾಮವೊಂದದು ।
ತೋರ್ಪುದುರುತರ ತಿಮ್ಮಾನಗರವೆನಿಪ್ಪ ನಾಮದೊಳು ॥
ದರ್ಪಕಾರಿಯ ಭಕ್ತರಗಣಿತ ।
ರಿರ್ಪರಾ ಗುರು ಲಿಂಗ ಚರರಸ ।
ಮರ್ಪಕಾಚಾರದಲಿ ಪೂಜಿಸಿ ತೃಪ್ತಿಗೊಳಿಸುತ್ತ ॥೮॥

ಅವರೊಳತ್ಯುತ್ತಮರು ಜನರಂ ।
ಸವಿನಯಾದರದಿಂದ ಕಾಂಬರು ।
ಸುವಿಮಳಾಂತಃಕರುಣಪೂರಿತ ಸಧುಹೃದಯದವರು ॥
ತವೆಸುಶಿವಲಿಂಗಾರ್ಯನಾತನ ।
ಯುವತಿ ಶಿವದೇವಾಂಬೆಯೆಂಬುವ ।
ಧವಳವಪುವಿನ ದಂಪತಿಗಳನ್ನೆಷ್ಟು ಬಣ್ಣಿಪುದು ॥೯॥

ನಿತ್ಯ ಮುಂಬೆಳಗಿನೊಳು ತಾನೇ ।
ಳುತ್ತ ಶಿವಲಿಂಗಕ್ಕೆ ನಮ್ರದಿ ।
ಮತ್ತೆ ಪತಿಪಾದಾಬ್ಜಕಾನತೆಯಾಗಿ ಧೂಳವನು ॥
ಉತ್ತಮಾಂಗಂಗಕ್ಕೆ ತಳೆಯುತ ।
ಚಿತ್ತಶುದ್ಧಿಯೊಳಿಂದ ತದ್ ಗೃಹ ।
ಕೃತ್ಯಗೈಯಲು ತೊಡಗುವಳು ಶಿವದೇವಿ ಸಾಧ್ವಿಮಣಿ ॥೧೦॥

ನಿಂದು ಮುಡಿಯನ್ನುಟ್ಟು ಸಂಭ್ರಮ ।
ದಿಂದ ಪೂಜೋತ್ಸವಕೆ ಸನ್ನುತ ।
ಗಂಧಭೂತಿ ಶಿವಾಕ್ಷ ಧೂಪಾರತಿಯ ಪತ್ರಗಳ ॥
ಹೊಂದಿಕೆಯ ನೈವೇದ್ಯ ಪನಿಗೆ ತಾ ।
ನಿಂದುಧರನರ್ಚನೆಯನೆಸಗುತ ।
ಮಂದಹಾಸದೊಳಿರುವಳಾ ಶಿವದೇವಿಯನುದಿನದಿ ॥ ೧೧ ॥

ಚಪಲ ಚಂಚಲ ಕುಟಿಲ ತಾಮಸ ।
ಮುಪರಿ ಪುಸಿವಾತುಗಳ ಪೆರರುರೆ ।
ತಪಿಸುವಪಲಾಪಗಳನಿಷ್ಠುರ ನಿಂದೆ ಕುಂದುಗಳ ॥
ವಿಪುಲ ಮದಮಾತ್ಸರ್ಯ ವಂಚನೆ ।
ಕುಪಿತ ಕರ್ಕಶ ಕಪಟ ಮೊದಲಾ ।
ದಪಶಯದ ದುರ್ಗುಣಗಳೊಂದುಂ ತಿಳಿಯಳಾ ಸಾಧ್ವಿ ॥ ೧೨ ॥

ದಾನ ಧರ್ಮ ಪರಾಯಣಳು ದು ।
ರ್ಹೀನ ವಿಷಯಕ್ಕೆಳಸದವಳಭಿ ।
ಮಾನದಿಂ ಗುರು ಲಿಂಗ ಜಂಗಮರನ್ನು ಪೂಜಿಸಳು ॥
ದೀನ ದಲಿತರ ಕಂಡು ನೊಂದುರೆ ।
ಸಾನುರಾಗದಿ ನೀಡಿ ನಲಿದು ।
ತ್ಥಾನ ಪುಣ್ಯದ ಕಾರ್ಯ ಸಾಧಿಸುತಿರ್ದಳಾ ಮಾನ್ಯೆ ॥ ೧೩ ॥

ಪತಿಯೆ ಶಿವನ ಸಮಾನಮಾತನೆ ।
ನುತಿಯದೇ ಮಹಮಂತ್ರ ಸಂತತ ।
ಅತಿ ಮುದದೊಳುಪಚರಿಪುದೇ ಶಿವಪೂಜೆ ಪದಕೆರಗಿ ॥
ಹಿತದಿ ಪೊಗಳ್ವುದೆ ಹರನ ಭಜನೆಯು ।
ವ್ರತವಿದೇ ಸತ್ಪತಿವ್ರತೆಗೆ ಸದ ।
ಇತರ ಭಾವನೆ ಸಲ್ಲದೆಂದರಿದಿರ್ದಳಾ ಸುಗುಣೆ ॥ ೧೪ ॥

ಅತ್ತೆ ಮಾವಂದಿರ ನುಡಿಗಳಂ ।
ಮತ್ತೆನಿಸದಂತಾಲಿಸುವಳು ಮ ।
ಹತ್ತರದ ಪತಿಸೇವೆಗೈವಳು ಹೊತ್ತುಗಳನರಿತು ॥
ಚಿತ್ತಜಾರಿಯ ಪೂಜಿಸುವಳು ಸು ।
ಚಿತ್ತದಿಂ ಶಿವಕಥೆಯ ಕೇಳುವ ।
ಳುತ್ತಮೊತ್ತಮವೆನಿಪ ಸದ್ಗುಣಗಳಲಿ ಶೋಭಿಪಳು ॥ ೧೫ ॥

ಗುರುವ ಪೂಜಿಸುವಳು ಬರಲು ಚರ ।
ವರರಿಗುಣಬಡಿಸುವಳು ನೆರೆಯ ।
ಲ್ಲಿರುವ ಜನರೊಳು ಸರಳತನದಿಂ ನಡೆಯುವಳು ಮತ್ತೆ ॥
ಪರಪುರುಷರನು ತಂದೆ ತಮ್ಮಂ ।
ದಿರುಗಳಂದದೆ ಭಾವಿಸುವಳಾ ।
ದರಿಪಳೆಲ್ಲಾ ನೆಂಟರಿಷ್ಟರ ಭಾವಗಳನರಿದು ॥ ೧೬ ॥

ಇಂತಿರುವ ಶಿವದೇವಿ ಮಾತೆಗೆ ।
ಚಿಂತೆಯೊಂದಿಹುದೇನ ಪೇಳುವು ।
ದಂತರಂಗದೊಳನವರತ ಸತ್ಪುತ್ರನಿಲ್ಲೆಂದು ॥
ಎಂತು ಮಾಡುವೆನೆಂತು ಬಾಳುವೆ ।
ನೆಂತು ವಂಧ್ಯಾತನವನೀಗುವೆ ।
ನೆಂತುಪರಶಿವ ಕರುಣಿಸುವನೆಂದಾಡಿಕೊಳುತಿಹಳು ॥ ೧೭ ॥

ಉಡಲು ತೊಡಲನುಕೂಲವಿದ್ದಡು ।
ಸಡಗರದ ಪತಿನೇಹದಿಂದಿರ ।
ಲಡಿಗಡಿಗೆ ತವರೂರಿನವರೈತಂದು ನುಡಿಸಿದಡು ॥
ಮಡದಿಯರಿಗೊಬ್ಬಣುಗನಿರದಿರೆ ।
ಕಡುವ್ಯಸನವಡಸುವದು ನಿಜವಿದು ।
ಪೊಡವಿಯಾ ಮೇಲಿರುವ ಸತಿಯರ ಪಾಡು ಹೀಗಿಹುದು ॥ ೧೮ ॥

ಮಗನ ಪಡೆಯುವದೆಂದೊ ಮಗುವಿನ ।
ನಗುಮುಖವನಿಟ್ಟಿಸುವದೆಂದಿಗೊ ।
ಮಗುಳೆಯನ್ನೀ ತೋಳ್ಗಳಿಂದಾಲಿಂಗಿಪುದೆಂದೊ ॥
ಸೊಗಸಿನಿಂ ಮುದ್ದಿಡುವದೆಂದಿಗೊ ।
ಹಗುರೆನಿಸದಾತ್ಮಜನ ಪಡೆವುದು ।
ಜಗದೊಳೆಂದಿಗೆಯೆನುತ ಮನದೊಳು ಚಿಂತಿಸುತ್ತಿರ್ದಳ್ ॥ ೧೯ ॥

ಕಾಂತನೊಲವಂ ಪಡೆದಿರಲುಮಾ ।
ಕಾಂತನೊಲವಿರಬೇಕು ಕಾಂತೆಗೆ ।
ಕಾಂತಿಯುತ ಕುವರನ ಪಡೆಯಬೇಕಾದರೆಯು ಬರಿದೆ ॥
ಭ್ರಾಂತಳಾದರದೇನು ಫಲವೆಂ ।
ದಾಂತು ಸುವಿಚಾರವನು ಮನದೊಳು ।
ಶಾಂತ ಭಾವದಿ ಶಿವನೆ ಕರುಣಿಸಬೇಕೆನುತ್ತಿಹಳು ॥ ೨೦ ॥

ಪರಮತರದೀಯತಿ ಪುರಾಣವ ।
ನುರುಮುದದೊಳೋದುವರಿಗಂ ಪೇ ।
ಳ್ವರಿಗೆ ಆಲಿಸುವರಿಗೆ ಸದ್ಗುರು ಕೋರಿ ಸಿದ್ಧೇಶಂ ॥
ಚಿರತರಾಯುರರೋಗ್ಯವೈಸಿರಿ ।
ಪರಮ ವಿದ್ಯೆ ಸುಭಕ್ತಿ ಮೊದಲಾ ।
ಗಿರುವ ಸತ್ಫಲಗಳನುಕರುಣಿಸುತಿರ್ಪನಿದು ದಿಟವು ॥ ೨೧ ॥

ಅಂತು ಸಂಧಿ ಎರಡಕ್ಕಂ ಪದನು ೪೩ ಕ್ಕಂ ಮಂಗಲಂ ಮಹಾ

ಶ್ರೀ ಶ್ರೀ ಶ್ರೀ

॥ ಶ್ರೀಗುರು ಕೋರಿ ಸಿದ್ಧೇಶ್ವರಾಯನಮಃ ॥



# ಮೂರನೆಯ ಸಂಧಿ

ಸೂಚನೆ—ತಿರಿಯೊಳಗೆ ಶಿವಲಿಂಗ ಮೋಣ್ಪರ ।
ತರಶಿವಮ್ಮ ಸುದಂಪತಿಗಳಿಗೆ ।
ಯಿರದೆ ಜನಿಸಿದ ಕೋರಿ ಸಿದ್ಧನು ಪರಮ ಸುತನಾಗಿ ॥

ಪರಶಿವನ ಪರಿಪೂರ್ಣ ರೂಪನ ।
ಪರಮ ಗಿರಿಜಾ ರಮಣನೀಶನ ।
ಶರಣ ಜನ ಸಂತಾನನೆನಿಸಿದ ಶಂಭುವಿನ ಭವನ ॥
ಶಿರದಿ ಚಂದ್ರನಗಳದಿಗರಳವ ।
ಕರಗಳಲಿ ಶೂಲಾದಿಗಳ ನೆರೆ ।
ಧರಿಸಿದ್ಯೆನೊಗದಸಮನೇತ್ರನ ಪದಕೆ ನಮಿಸುವೆನು ॥೧॥

ಒಂದು ದಿನ ಶಿವದೇವಿ ಕಂದನ ।
ಸಂದ ಬಯಕೆಯೊಳ್ನಿದ್ರಿಸುತ್ತಿರೆ ।
ಯಿಂದುಧರ ತಾ ಬಂದು ಸ್ವಪ್ನದೊಳಿಂತುಪೇಳಿದನು ॥
ಕುಂದಬೇಡಾ ಮಗಳೆ ಮನದಲಿ ।
ಬಂದು ನಿಲ್ವದು ಯೆನ್ನ ತೇಜವು ।
ಸಂದೆಗವು ಯಿನಿತಿಲ್ಲವೀಗಳ್ ಶಾಂತಳಾಗೆಂದಾ ॥೨॥

ಮತ್ತೆ ಪೇಳಿದ ಮಗಳೇ ಕೇಳೌ ।
ಉತ್ತಮೋತ್ತಮನಣುಗನುದಯಿಸಿ ।
ಪೃಥ್ವಿಯಲಿ ಗುರುಸಿದ್ಧನೆಂಬುವ ನಾಮವನು ತಾಳಿ ॥
ಬಿತ್ತರಿಪ ಮಹಮಹಿಮೆಗಳ ತಾ ।
ನುತ್ತರಿಪ ಜನ ಕಲ್ಮಷಂಗಳ ।
ಸತ್ಯವಿದು ಸಟೆಯಲ್ಲ ಸಾಧ್ವಿಯೆಂದು ಹರನುಡಿದ ॥ ೩ ॥

ಅನಿತರೊಳು ಶಿವದೇವಿ ತಾಯಿಗೆ ।
ಘನತರದ ಸ್ವಪ್ನವದು ನೀಗಲು ॥
ಕ್ಷಣದೆ ಕೌತಕವಾಂತು ಹರಹರ ಎಂದು ಶಿರದೂಗಿ ॥
ಮನುಮಥಾರಿಯು ಬಂದು ಸೂಕ್ಷ್ಮ ಸು ।
ತನುವಿನಲಿ ಅಭಯವನುಯಿತ್ತನು ।
ಎನುವದನು ಅರುಹಲಿಕೆ ಪತಿಬಳಿಗೈದಿದಳು ಮುದದಿ ॥ ೪ ॥

ಬಂದು ಪತಿಪದಪಳ್ಗಣೆಯ ಹಚ್ಚುತ ।
ವಂದನೆಯಗೈದಾಗ ನಿಂದಿರೆ ।
ಸಂದ ಶ್ರೀ ಶಿವಲಿಂಗ ಸ್ವಾಮಿಯು ಸತಿಯ ಮೊಗನೋಡಿ ॥
ಇಂದಿದೇನಾಶ್ಚರ್ಯ ನಿನ್ನಯ ।
ಅಂದವದು ಬೇರಾಗಿರುತ್ತದೆ ।
ಸಂದೆಗವದಿಲ್ಲೊದಲು ಬೆಸಸುವುದಭಿಮತವನೆಂದ ॥ ೫ ॥

ಸಾಧ್ವಿಮಣಿ ಸುಶಿವಮ್ಮ ದೇವಿಯು ।
ಮೋದದಲಿ ಪೇಳಿದಳು ನಾಥಗೆ ।
ಈ ದಿನದ ಕನಸಾದ ಪರಿಯಂ ಹರುಷವದು ಪೆರ್ಚಿ ॥
ಖೇದಹರ ಶ್ರೀ ಶಂಭುಲಿಂಗನು ।
ಸಾದರದಿ ತಾ ಬಂದುವಚಿಸಿದ ।
ಬೋಧವನು ನೀ ಕೇಳುತೋಷದ ಸೂಚನೆಯನೀಗ ॥ ೬ ॥

ಮಗಳೆ ನಿನ್ನಯ ಮನದಿ ನೆಲಸಿಹ ।
ದುಗುಡವನು ತ್ಯಜಿಸುತಲಿ ಸುಖದಿರು ।
ಮಿಗಿಲು ಮಹಿಮವ ತೋರ್ಪ ಅಣುಗನು ವುದಯಿಸುವ ನಿನಗೆ॥
ಬಗೆಯ ಬೇರೊಂದರಿಯದಿರುತವ ।
ಸುಗಮ ವಂಶವ ಬೆಳಿಪ ಸಹಜಿದು ।
ದೃಗತ್ರಯನು ಹೀಗೆಂದು ಪೇಳಿದನೆಂದಳಿಂದುಮುಖಿ ॥೭॥

ಪೇಳಿದನು ಸತಿವಚನ ಮನದೊಳು ।
ತಾಳಿದನು ಬಲು ಹರುಷ ಶಿವಶಿವ ।
ಪಾಲಿಸಿದ ತನಯನನು ದೀನಗೆ ದಯರಸವವೆರಸಿ ॥
ಕಾಲಕಂಧರ ಪೇಳಿದಾನುಡಿ ।
ಜಾಳವಪ್ಪುದೆ ಧನ್ಯರಾದೆವು ।
ನೀಲಕೇಶಳೆ ಕುಶಲದಿಂದಿರುಯೆಂದು ಪೇಳ್ದಾಗಳ್ ॥೮॥

ತೋಷದಿಂ ದಂಪತಿಗಳುರುವು ।
ಲ್ಲಾಸದಿಂ ಸ್ನಾನವನು ಗೈಯುತ ।
ಲೇಸುತರ ಶುಚಿವಸನ ಧರಿಸುತ ಭಸಿತ ಫಣೆಗಿಡುತ ॥
ಮೀಸಲಾಗಿಹ ತೋಯದಿಂದಲಿ ।
ಯೀಶ ಮೂರ್ತಿಯ ಜವದಿ ಪೂಜಿಸಿ ।
ಧ್ಯಾಸಗೊಂಡುರುಪರಮ ಪಂಚಾಕ್ಷರ ಮಹಾ ಮಂತ್ರ ॥೯॥

ಕರೆದು ಹರಶರಣರನು ಗೇಹದಿ ।
ಪರಿಪರಿಯ ಮಧುರಾನ್ನ ನಿಚಯವ ।
ಬೆರಸಿ ಭೋಜನವಿತ್ತು ತೃಪ್ತಿಯಗೊಳಿಸಿ ನಿಖಿಲರಿಗೆ ॥
ವರಸುವೀಳ್ಯದಿ ದಕ್ಷಿಣಗಳಿಂ ।
ಹರುಷ ಬಡಿಸಲ್ಕಾಗಣಂಗಳು ।
ಬೆಸಸಿಯಾಶೀರ್ವಚನ ನುಡಿದರು ದಂಪತಿಗಳಿತ್ತು ॥೧೦॥

ಮುಂದಗಮನೆ ಶಿವಮ್ಮ ದೇವಿಯು ।
ನಂದದಿಂ ತವಪತಿಯ ಕರೆಯುತ ।
ತಂದು ಯೆಡೆಮಾಡಿದಳು ಷಡ್ರಸಯುಕ್ತ ಅಹಾರ ॥
ಇಂದುಧರನಂ ಮನದಿ ಸ್ಮರಿಸುತ ।
ಲಂದು ಮಾಡಿದ ಭೋಜನವತಾಂ ।
ಸಂದಸತಿಗುಸುರಿದನು ನೀ ಭೋಜನವ ಮಾಡೆಂದು ॥ ೧೧ ॥

ಪತಿಯುಸುಜ್ಞಾನಿ ಸತಿ ಶಿವಮ್ಮನು ।
ಹಿತದಿಯಾರೋಗಣೆಯ ಮುಗಿಸುತ ।
ಪತಿತ ಪಾವನನಾದ ಶಿವನನು ಸ್ಮರಿಸುತಲಿ ಮನದಿ ॥
ಕೃತಕಮಣಿಮಂಚವನು ಬಾಗಿಸು ।
ತತಿ ಮೃದುವನಾಂತಿಹಸುತಲ್ಪವ ।
ಸತಿ ಶಿರೋಮಣಿ ಹಾಸುತಲಿ ಮಲ್ಲಿಗೆ ಹರವಿ ಮೇಲೆ ॥ ೧೨ ॥

ಇರುಳು ಯೆರಡನೆಯಾಮಸಂತರ ।
ಸ್ಮರನಕೇಳಿ ವಿಲಾಸದೊಳು ಸಮ ।
ಸರಸ ಕಲೆ ಪ್ರೌಢತ್ವನಟಿಸುತಮಿರಲು ಪರವಶದಿ ॥
ಇರುತಿರಲು ಸತಿಪತಿಗಳೀರ್ವರು ।
ಅರಿದು ನಾಲ್ಕನೆ ಝಾವದಿರವನು ।
ಹರಹರಾಹರ ಎನುತಲೆದ್ದರು ಹಸನಮುಖದಿಂದ ॥ ೧೩ ॥

ಪಂಕಜಾಸನ ಹರಿನಮಿತ ಪದ ।
ಶಂಕರನ ವರಬಲದಿ ದೇವಿಗೆ ।
ಕೊಂಕುಮಿಲ್ಲದೆ ಗರ್ಭಚಿಹ್ನವು ತೋರಲನುವಾಗೆ ॥
ಶಂಕೆಗೊಳುತತಿ ಹೃದಯದಲಿ ಸುಖ ।
ದಂಕಿತನದಯವಾಯ್ತು ಯೆನ್ನಗೆ ।
ಕಿಂಕರಳೆ ಬಡಬಾಲಕಿಯ ರಕ್ಷಿಪುದು ಸಲೆಯೆಂದಳ್ ॥ ೧೪ ॥

ದಿನದಿನದೊಳಾ ಮಾನ್ಯ ದೇವಿಗೆ ।
ತನುಸುಮಧ್ಯವು ಬೆಳೆಯುತಿರುತಿರೆ ।
ಮನಕೆ ಬೇಸರವಾಗಿ ಬಯಕೆಯ ಬಲವು ಬಹಳಾಗೆ ॥
ಸ್ತನದ ಚೂಚುಕ ಕಪ್ಪಡರೆ ಮಿಗೆ ।
ವನಜ ಮುಖಿ ಮುಖಶ್ವೇತವಾಗುತ ।
ತನಗೆ ಹೇಯವದಾಯ್ತು ಮಿಗೆ ಭೋಜನ ಪದಾರ್ಥದೊಳು ॥

ಒಂದೆರಡು ನಾಲ್ಕಾಗೆ ಮಾಸವು ।
ಸಂಧಿಸಿತು ಐದನೆಯ ತಿಂಗಳು ।
ಮುಂದು ಬಂದರು ಬಂಧುಬಳಗದ ವೃಂದವದು ಗೂಡಿ ॥
ಚಂದದಲಿ ಶೀಮಂತ ಕಾರ್ಯವ ।
ನಂದು ಯೆಸಗುತ ಹರುಷದಿಂದಲಿ ।
ತಂಧಪಚ್ಚಸುವಸ್ತ್ರ ಪುಷ್ಪವ ಧರಿಸಿದರು ನಲಿದು ॥ ೧

ಚಂದದಿಂದಲಿ ಷಡ್ರಸಾನ್ನವ ।
ನಂದು ಪಾಕವ ಮಾಡಿ ಸರ್ವರು ।
ನಂದದಿಂ ಭೋಜನವ ಗೈದರು ಮೋದದಿಂ ಕೂಡಿ ॥
ಚಂದಿರಾಸ್ಯೆ ಶಿವಮ್ಮ ದೇವಿಯು ।
ವಂದುದಿನ ಯುಗವಾಗಿ ಕಳೆಯುತೆ ।
ಮಂದರಾದ್ರಿಯನಿಲಯದೇವನ ಧ್ಯಾನದೊಳಗಿರಲು ॥ ೧

ಹರನ ತೇಜವು ಗರ್ಭದೊಳಗಿರೆ ।
ತರುಣಿಮಣಿಯಳ ಕಳೆಯು ಪೆರ್ಚಿತು ।
ಸ್ಮರಹರನ ಕೃಪದಂಶವರ್ಧನವಾಗೆ ಸಾಂಗದಲಿ ॥
ಭರದೊಳೆಲ್ಲಾ ಕರಣ ಕಾಂತಿಯು ।
ಮರೆಸಿದುದು ಪೂರ್ಣೇಂದು ಕಲೆಗಳ ।
ಪಿರಿದು ತೇಜದಿ ಬೆಳಗಿದುದು ಶಿವದೇವಿ ಗಾತ್ರವದು ॥ ೧೮

ಮಾಸ ಆರೇಳೆಂಟು ನವಮವು ।
ಆಸರಿಸಲಾಕ್ಷಣದಿ ದೇವಿಗೆ ।
ಬೇಸರಿಕೆ ನಡು ಬೇನೆ ತೋರುತಲಿರುತಿರಲ್ಕಿತ್ತ ॥
ಈಶಧ್ಯಾನವ ಮಾಡಿ ಶಿವಲಿಂ ।
ಗೇಶ ಬಹುತವಳದಲಿ ಚರರಿಂ ।
ಲೇಸಿನಾಸೂಲ್ಗಿತ್ತಿಯರ ತಾಂ ಭರದಿ ಕರೆಸಿದನು ॥ ೧೯ ॥

ದೊರೆವಡೆದ ಶ್ರೀ ಶಾಲಿವಾಹನ ।
ವರಶಕದ ಪದಿನೇಳು ನೂರ್ಕ್ಮೇ ।
ಲಿರುವ ಪದಿನೇಳಕ್ಕೆ ಸರಿಯಹ ವಿಜಯ ವತ್ಸರದ ॥
ಪರಮ ಚೈತ್ರಸುಶುಕ್ಲಪಕ್ಷದ ।
ನೆರವ ಪಂಚಮಿ ತಿಥಿಸುಗುರುವಾ ।
ರುರುತರದ ರೋಹಿಣಿಸುಪಗಲಿನ ವೃಷಭ ಲಗ್ನದೊಳು ॥ ೨೦ ॥

ಹರನ ಸಮ ಸಿದ್ಧೇಶನಂ ಉರು ।
ತರದ ಕುಶಲದಿ ಪಡೆದಲಾಗಳ್ ।
ಮರುಜನತಿ ತನಿಗಂಪು ಬೀರಿದನದಿಗಳತಿ ತ್ವರದಿ ॥
ನಿರುಮಲಗಳಾದವು ಸುಕುಜ ತತಿ ।
ಪಿರಿದು ಫಲಗಳ ನೀಡಿದವು ಬಲು ।
ಬರಡು ಗೋವ್ಗಳು ಪಾಲುಗರೆದವದೇನು ಬಣ್ಣಿಪುದು ॥ ೨೧ ॥

ನಿರ್ಮಲದರೋಚಿಗಳ ರವಿತಾ ।
ಕೂರ್ಮೆಯಿಂ ಪರ್ವಿದನು ತಿರೆಗೆ ಸು ।
ಕರ್ಮವನು ಆಚರಿಸೆ ಜನಸಮುದಾಯದೊಳಗೆಲ್ಲ ॥
ಧರ್ಮ ದಾನಂಗಳನು ಗೈಯ್ಯುತ ।
ಪೇರ್ಮೆ ಹೃದಯಗಳಾಗಿ ಸರ್ವರು ।
ಮರ್ಮವರಿತಾ ಸಿದ್ಧನುದಯದ ಮಹಿಮೆ ಪೊಗಳಿದರೂ ॥ ೨೨ ॥

ಇಂತು ಶುಭಕರ ತಿಥಿಯುಯಿಸೆದಿರೆ ।
ಸಂತ ಶಿವಲಿಂಗಾರ್ಯಸ್ವಾಮಿಯು ।
ಕಂತುಹರನಾಚರಣೆ ಕ್ರಮವನು ವಹಿಸಿಮುದದಿಂದ ॥
ಸಂತಸದಿ ಗುರುವಂ ಕರೆಸಿ ಸೀ ।
ಮಂತ ಶುಭಕರ್ಮವನು ಮಾಡಿಸಿ ।
ಕಾಂತಿಯುತವಹ ಮುದ್ದುಮಗುವಿಗೆ ಲಿಂಗಧರಿಸಿಸಿದಂ ॥ ೨೩ ॥

ಲಿಂಗಧಾರಣೆ ಗೈದುಗುರುವರ ।
ಮಂಗಲಾಂಗದಿ ಭಸಿತಸವರುತ ।
ತುಂಗಮಹಿಮನುಮಾಗುನೀನೆಂದಾಸುಶಿವಲಿಂಗ ॥
ಪುಂಗವನು ಪರಸುತ್ತಲಾಗಳ್ ।
ಅಂಗನಾಮಣಿಯರನು ಕರೆಸುತ ।
ಇಂಗಿತೀರಾರ್ದಿನಗಳಿಂದಿಗೆ ನಾಮವಿಡಿರೆಂದ ॥ ೨೪ ॥

ಆಲಿಸುತ ಗುರುಲಪಿತಸ್ತ್ರೀಯರು ।
ಮೇಲುಬಣ್ಣದ ತೊಟ್ಟಿಲೊಳ್ಶುಭ ।
ಬಾಲಕನ ಮಲಗಿಸುತ ತಾಯಿ ಶಿವಮ್ಮನನಕರೆದು ॥
ಲೀಲೆಯಿಂ ಪೀಠದಲಿ ಕೂಡ್ರಿಸಿ ।
ಫಾಲಕ್ಕಚ್ಚುತೆ ಕುಂಕುಮವನಂದ್ ।
ಲೋಲದಿಂ ಪಾಡಿದರು ಜೋಗುಳನಾರಿಯರು ಮುದದಿ ॥ ೨೫ ॥

ಕಂದನೇ ಜೋ ಶೈವವನ ಮಾ ।
ಕಂದನೇ ಜೋ ನಮಿತಸುರಸಂ ।
ಕ್ರಂದನೇ ಜೋ ಸೌಖ್ಯಜಲನಿಧಿ ಚಂದ್ರನೇ ಜೋ ಜೋ ॥
ಸುಂದರಾಸ್ಯನೆ ಜೋ ಸಕಲಜನ ।
ದಂದವರಿದುದ್ಧರಿಸುವನೆ ಜೋ ।
ಇಂದುಧರನ ಪರಾವತಾರನು ಮೆನಿಸುವನೆ ಜೋ ಜೋ ॥ ೨೬ ॥

ಪರಮರೇವಣಸಿದ್ಧ ವಂಶದ ।
ಮೆರೆವ ಮುಕ್ತಾಫಲವೆನಿಸುತೀ ।
ಧರೆಯ ಸಜ್ಜನರನ್ನು ಮುದದಿಂ ಪಾಲಿಸುವನೆನಿಸಿ ॥
ಗುರುತನವ ವರವೀರಶೈವದಿ ।
ಧರಿಸಿ ಶಿವತತ್ವವನು ನೆನಹಿ ನೊ ।
ಳಿರಿಸಿ ದಶದಿಕ್ಕಿನೊಳು ಚರಿಸೆಂದಾಗ ಪರಸಿದರು ॥ ೨೭ ॥

ನಾರಿಯರು ಮನ್ಮಥನ ಸಮರದ।
ಶೂರೆಯರು ಸುವಿಚಾರಮತಿಯುತ ।
ಧೀರೆಯರು ಶೃಂಗಾರರಸವನು ಬೀರುವಬಲೆಯರು ॥
ದೋರೆಳಂಕಣಗಳನು ಧರಿಸುತೆ ।
ಚಾರುಕರದಿಂತೂಗುತಲಿದನಿ ।
ದೋರಿಶಿಶುವನು ಪಾಡಿದರು ಸಿದ್ಧೇಶನಾಮದಲಿ ॥ ೨೮ ॥

ಈ ಪರಿಯೊಳೆಲ್ಲಾ ಜನಂಗಳು ।
ನೂಪಸುತನಂತಿರುವ ಕಂದನ ।
ರೂಪವನು ಕಂಡಮಿತಸಂತೋಷದೊಳುಕೂಡುತ್ತ ॥
ಬೇಪನಿತು ಬಾಗಿನವ ಕೊಳುತಲಿ ।
ಪಾಪವನು ಪರಿಹರಿಪ ಘನಗ ।
ಚಾಪನಂನೆನೆಯುತ್ತ ನಡೆದರುತಮ್ಮ ಗೃಹಗಳಿಗೆ ॥ ೨೯ ॥

ಪರಮತರದೀ ಯತಿಪುರಾಣವ ।
ನುರುಮುದದೊಳೋದುವರಿಗಂ ಪೇ ।
ಳ್ವರಿಗೆ ಆಲಿಸುವರಿಗೆ ಸದ್ಗುರು ಕೋರಿಸಿದ್ಧೇಶಂ ॥
ಚಿರತರಾಯುಋರೋಗ್ಯವೈಸಿರಿ ।
ಪರಮವಿದ್ಯೆ ಸುಭಕ್ತಿಮೊದಲಾ ।
ಗಿರುವ ಸತ್ಫಲಗಳನು ಕರುಣಿಸುತಿರ್ಪ ನಿದುದಿಟವು ॥ ೩೦ ॥

ಅಂತು ಸಂಧಿ ನೂರಕ್ಕಂ ಪದನು ೬೩ ಕ್ಕಂ ಮಂಗಲಂ ಮಹಾ

ಶ್ರೀ ಶ್ರೀ ಶ್ರೀ

॥ ಶ್ರೀಗುರು ಕೋರಿ ಸಿದ್ಧೇಶ್ವರಾಯನಮಃ ॥





# ನಾಲ್ಕನೆಯ ಸಂಧಿ

ಸೂಚನೆ - ಪರಮತರ ಶಿವಲಿಂಗಸ್ವಾಮಿಯು ।
ತರುಳನಾದಾ ಕೋರಿಸಿದ್ಧಗೆ ।
ಭರದಿವಿದ್ಯೆಯ ಕಲಿಸುತ ಸುದೀಕ್ಷೆಯನುಗ್ರೈಸಿದನು ॥

ಸುರಸುಗಂಗೆಯು ಸೋಮಕಲೆಯೂ ।
ನಿರುತ ಶಿರಸಿನೊಳಾಂತು ಶೋಭಿಸಿ ।
ಯುರಿಯುವಗ್ನಿ ಸುತೇಜರವಿಶಶಿ ದೃಗಗಳಿಂದೆಸೆದು ॥
ಸ್ಮರನ ಮಿನುಗುವ ದಿವ್ಯದೇಹವ ।
ನುರುಹಿ ಭಸಿತವ ಶುಭ್ರಕರಾಂಗದಿ ।
ಧರಿಸಿ ಮೆರೆಯುವದೇವ ಯೆನ್ನನು ರಕ್ಷಿಪುದು ಸತತ ॥ ೧ ॥

ಇತ್ತ ದಿನದಿನದಲ್ಲಿ ಶುಭ್ರಕಲೆ ।
ವೆತ್ತುವರ್ಧಿಪ ಬಾಲಶಶಿ ಪೋ ।
ಲುತ್ತಲಿರುತಿರೆ ಪಿತನುಮಾತೆಯು ಯೀಕ್ಷಿಸುತ್ತಾಗಳ್ ॥
ಚಿತ್ತದೊಳು ಆನಂದಪಡುತಲಿ ।
ಪ್ರತ್ಯಗಾತ್ಮ ಪರೇಶನಸ್ತುತಿ ।
ಸುತ್ತಹೃದಯದಿ ದೇವನೀನೇ ರಕ್ಷಿಪುದುಯೆಂದರ್ ॥ ೨ ॥

ಬಾಲನಾಡುವ ರೀತಿ ನೋಡಲು ।
ಲೀಲೆಯದು ಬೇರಾಗಿ ಯಿರುತಿರೆ ।
ಕಾಲಕಂಧರ ಶಿವನ ಧ್ಯಾನದಿ ಮಗ್ನನಾಗಿರುತ ॥
ಜಾಳುವಿಷಯವನೊಮ್ಮೆ ವಚಿಸದೆ ।
ಮೇಲು ಕೀಳುಗಳೆಂಬುದರಿಯದೆ ।
ಶೀಲಗುಣಯುತನಾಗಿ ಲೀಲೆಯ ತೋರುತಿರುತಿರ್ದಂ ॥ ೩ ॥

ಆಡನೊಮ್ಮೆಯು ಪರರ ನಿಂದೆಯ ।
ಆಡಿದವರನು ಸೇರದಿರುವನು ।
ಕೂಡಿಯಾಡುವ ಸದುಹೃದಯದಾ ಮಿತ್ರರೊಂದಿಗೆ ಮೇಣ್ ॥
ಬೇಡಲರಿಯನು ವಿಷಯ ಸುಖಗಳ ।
ಕಾಡದಿರುವನು ತಂದೆ ತಾಯ್ಗಳ ।
ನೋಡೆ ಶಿವಶರಣರನು ಕೂಡಲೆ ಮಣಿವವರ ಪದಕೆ ॥ ೪ ॥

ಮಾತೆ ಪಿತರನು ಶಿವನೆಯೆಂದು ।
ಪ್ರೀತಿಸುವ ಘನ ಭಕ್ತಿಯಿಂದಲಿ ।
ಜೊತೆಯ ಮಾಡನು ಅಹಿತ ಹುಡುಗರನಾವ ಕಾಲದೊಳು ॥
ಭೀತಿ ಪಿರಿದಿರುತಿಹುದು ಪಾಪ ।
ವ್ರಾತ ಸ್ಥಿತಿಗನುಸರಿಸಲಾರನು ।
ಸೋತು ಬರುವನು ಸುಂಟೆ ಜನರ ವ್ರಾತದಿಂ ತಾನು ॥ ೫ ॥

ಈ ತೆರದ ಬಾಲಾಟದೊಳಗಿರೆ ।
ಆತುದೈದನೆ ವರ್ಷಪ್ರಾಯವು ।
ಪ್ರೀತಿಯಲಿ ಶಿವಲಿಂಗಸ್ವಾಮಿಯು ಮುದ್ದುಮಗುವಿಂಗೆ ॥
ಸಾತಿಶಯದಲಿ ಅಕ್ಕರಂಗಳ ।
ನೋತು ಕಲಿಸಲು ಗುರುಗಳಿಂದಲಿ ।
ನಾಥ ಗುರುಸಿದ್ಧಾಖ್ಯನಂ ತಾಂ ಭರದಿ ಕಳಿಸಿದನು ॥ ೬ ॥

ಅನಿತರೊಳ್ಗಿರುವರನು ಮೊದಲಲಿ ।
ಅನಘರೂಪದಮನುನುವದೆನಿಸುವ ।
ಘನತರದ ಪಂಚಾಕ್ಷರವ ಲಿಖಿಸಿತ್ತು ಪೇಳಿದನು ॥
ತನಯನೀ ಪಠಿಸಿದನು ಪ್ರಥಮದಿ ।
ನಿನಗೆ ಮುಂದುಸುರುವೆನು ವಿದ್ಯದ ।
ಅನುವ ಮೇಣ್ ಶಾಸ್ತ್ರಗಳ ಸಂಗತಿಗಳ ನಲೆಗೊಳಿಪೆ ॥ ೭ ॥

ಈ ಪರಿಯೊಳ್ ಗುರುವರ್‍ಯ ವಚಿಸಲು ।
ತಾಪ ಹರ ಸಿದ್ಧೇಂದ್ರ ಬೆಸಸಿದ ।
ಆ ಪರಾತ್ಪರ ವಸ್ತು ಶ್ರೀಪಂಚಾಕ್ಷರದ ಬಗೆಯು ॥
ರೂಪಿಸೈ ಗುರುವರನೆ ಮನದ ಪ್ರ ।
ಲಾಪ ನೀಗುವ ತೆರದಿ ದಯದಿಂ ।
ಲೋಪವಾಗಲಿ ನಿಖಿಲ ಸಂಶಯ ಯೆನ್ನ ಹೃದಯದಲಿ ॥ ೮ ॥

ಹೀಗೆ ವಚಿಸಲು ಗುರುವಿನೊಳು ತಾ ।
ನಾಗ ತಿಳುಪಿದ ತೋಷದಿಂದ ಸ ।
ರಾಗದಿಂ ನೀಕೇಳು ಪರತರ ಪ್ರಣವದಾ ಬಗೆಯ ॥
ಬೇಗೆದೃಗಹರಿಬ್ರಹ್ಮಸಹಿತುರು ।
ತೂಗಿಕೊಂಬುದು ತನ್ನ ಉದರದಿ ।
ಹೀಗಿಹುದು ಓಂಕಾರ ಮಹಿಮೆಯು ಮಗನೆ ಕೇಳೆಂದ ॥ ೯ ॥

ಅ ಯೆನಲುಮಿದು ಅಜನುಮೆನಿಪುದು ।
ಉ ಯೆನಲುಮಿದು ವಿಷ್ಣುಮೆನಿಪುದು ।
ಮಾ ಯೆನಲುಮಿದು ಕಾಲಭೈರವ ರುದ್ರನೆನಿಸುವುದು ॥
ಈ ಯಥಾರ್ಥದಿ ಅ ಉ ಮ ಕೂಡಲು ।
ಆಯತದಿ ಓಂಕಾರವಾಯಿತು ।
ಕಾಯಜಾಂತಕನಣುಗ ಕೇಳೈ ಮುಂದಿನಾ ವಿವರಾ ॥ ೧೦ ॥

ಪರಿಯನರಿ ನಮನೆನಲು ದೇವನೆ ।
ಕ್ಷರದಿ ನಿನ್ನಗೆ ನಮಿಸಿ ಬೇಡುವೆ ।
ಭರದಿ ಶಿವನೆಂದೆನಲು ಸುಖದಾ ಸದನದಿರಿಸುವನು ॥
ವರದ ಓಂ ನಮಶ್ಶಿವಾಯದನ್ವಯ ।
ಅರಿದು ಸೂಕ್ಷ್ಮದ ಭಾವದೊಳಗುರೆ ।
ಸ್ಮರಿಸುತಪವರ್ಗವನು ಸೇರ್ವದು ಶಿವನ ಕರುಣದಲಿ ॥ ೧೧ ॥

ಹೀಗೆ ಗುರುವರ ಅರುಹಿ ಮುಂದಕೆ ।
ಸಾಗಿಸಿದ ವಿದ್ವತ್ವ ಕಲೆಗಳ ।
ರಾಗರಚನೆಗಳಿಂ ಸುಸಾಮವೇದ ಸಹವಾಗಿ ॥
ಸಾಗರಾನಂದನು ಗೊಡುವ ಸ ।
ರಾಗ ಬ್ರಹ್ಮಜ್ಞಾನದಿರುವಿನ ।
ಪೂಗವನು ತಿಳುಹಲ್ಕೆ ಸಿದ್ಧಗೆ ಹರುಷರಸಪುಣ್ಕೆ ॥ ೧೨ ॥

ಶುಚಿಮನದ ಸಿದ್ಧಂಗೆ ಗುರುಗಳು ।
ವಚಿಸೆ ನಿಗಮ ರಹಸ್ಯಸಾರದ ।
ನಿಚಯುಗಳನಭ್ಯಾಸಗೊಂಡನು ಬೇಸರಿಲ್ಲದಲೆ ॥
ಅಚಲಿತಾನಂದದಲಿತಾ ನಭ ।
ಕಚನ ಪಾದಪಯೋಜ ಧ್ಯಾನದ ।
ರಚನೆಯೊಳಗಿರುತಿರ್ದನಾ ಶರಣೇಂದು ಸಿದ್ಧೇಶ ॥ ೧೩ ॥

ಮಗನ ಚತುರತೆಗಂಡು ಮನದೊಳು ।
ಮಿಗೆ ಹರುಷದಿಂ ತಂದೆತಾಯ್ಗಳು ।
ಬಗೆಯೆ ಯೆಮ್ಮಯ ವಂಶದೀಪಕನೆಂದು ಹಿಗ್ಗುತಲೀ ॥
ಜಗವ ಪಾಲಿಪ ಶಿವನ ಮಹಿಮೆಯ ।
ಬಗೆಬಗೆಯೊಳುರುಸ್ತುತಿಸಿ ನಲಿಯುತ ।
ವಗರೊಗುವ ಪ್ರಭೆಯಾಂತ ಅಣುಗನ ಅಪ್ಪಿಮುದ್ದಿಡುತ ॥ ೧೪ ॥

ತುಂಗಮತಿ ಶಿವಲಿಂಗಸ್ವಾಮಿಯು ।
ಹಿಂಗಿಕೆಂಟನೆ ಅಬ್ಧಪ್ರಾಯವು ।
ಮಂಗಲ ಶ್ರೀ ಸಿದ್ಧಕುವರಗೆ ದೀಕ್ಷೆಗೊಡಲೆಸುತ ॥
ಸಾಂಗದಲಿ ಕರೆಸಿದನು ಗುರುಗಳ ।
ಪುಂಗದಲಿ ಮೇಲಾದ ಮೂರ್ತಿಯ ।
ಪೊಂಗಿ ಕೇಳಿದ ಕಾರ್ಯಭಾಗದ ಸಕಲ ಸಂಗತಿಯ ॥ ೧೫ ॥

ಆಲಿಸುತ ಕಡಲಯ್ಯ ಸ್ವಾಮಿಯು ।
ಶೀಲದೀಕ್ಷೆಯ ಬಗೆಯ ತಿಳಿಸಿದ ।
ಕಾಲವಿದು ಶುಭಮಾಘಮಾಸದ ಶುಕ್ಲಪಕ್ಷವು ಮೇಣ್ ॥
ಮೇಲೆ ಗುರುವಾಸರವು ದ್ವಾದಶಿ ।
ಬಾಲತಿಳಿವರ ಪುಷ್ಯತಾರವು ।
ಬಾಲವಾ ಕರಣವದು ಕೂಡಿದೆ ಯಿದುವೆ ಶುಭದಿನವೂ ॥ ೧೬ ॥

ವಟುವು ಜನಿಸಿದ ರಾಶಿಯಿಂ ತಾ ।
ನಟಿಸಿಹುದು ನವಸ್ಥಾನಕಿದು ಸಲೆ ।
ದಿಟವಿಚಾರದಿ ನೋಡೆ ಗುರುಬಲ ಪೂರ್ಣವಾಗಿಹುದು ॥
ಘಟಿಸಿದಾ ವರ ಮೀನಲಗ್ನವು ।
ಚಟುಲದೊಂದನೆಯಾಮದೊಳಗಾ ।
ಕುಟಿಲ ಗ್ರಹ ಮೂರಾರು ದ್ವಾದಶ ಸ್ಥಾನವಾಂತಿಹವು ॥ ೧೭ ॥

ಇಂತು ವರಮಾಹೇಶ್ವರನು ತಾ ।
ನಂತು ಶುಭಮುಹುರ್ತವನು ಪೇಳಲು ।
ಶಾಂತ ಶಿವಲಿಂಗಾರ್ಯ ಸ್ವಾಮಿಯು ತನ್ನ ಮನದೊಳಗೆ ॥
ಸಂತಸಂಬಡುತಾಗ ತರಿಸಿದ ।
ಕಂತುಹರನಿಭಸಿದ್ಧನಾ ಶುಭ ।
ವಾಂತ ದೀಕ್ಷಾಕಾರ್ಯಕಾ ಬೇಕಾದ ವಸ್ತುಗಳ ॥ ೧೮ ॥

ನಟ್ಟಬಾಳೆಯ ಕಂಬಗಳು ಮೇ ।
ಲ್ಕಟ್ಟುಗಳು ತಳಿರುಗಳು ನೆರೆಸು ।
ತ್ತಿಟ್ಟು ಜೋಲುವ ವಿವಿಧ ಸುಮಮಾಲಿಕೆಯು ಕೆಳಗಲ್ಲಿ ।
ಕಟ್ಟಿರುವ ಚಲುವಾದ ಚೌಕದ ।
ಕಟ್ಟೆ ಷಟ್ಸಮ್ಮಾರ್ಜನೆಯ ಮೇ ।
ಲಿಟ್ಟ ಸುಂದರ ರಂಗವಲ್ಲಿಯ ಚಂದವೇನೆಂಬೆ ॥ ೧೯ ॥

ಕಂಡೆ ಶಿವಲಿಂಗಯ್ಯ ಸ್ವಾಮಿಯು ।
ಕಂದನಿಗೆ ಸ್ನಾನವನು ಮಾಡಿಸಿ ।
ಚಂದನಿಂದಲಿ ಕರವ ಪಿಡಿಯುತ ಕೂಡಿಕೊಂಡಲ್ಲಿ ॥
ಅಂದವಾಗಿಹ ಮಂಟಪದಿ ತಾಂ ।
ಬಂದು ಕರಗಳ ಮುಗಿದು ಜವದಿಂ ।
ನಿಂದು ನುತಿಸಲ್ಕಾಚರಾರ್ಯರು ಮುದದಿ ಹರಸಿದರು ॥ ೨೦ ॥

ಗುರುವು ಪೂರ್ವಕ್ಕಭಿಮುಖದಿ ಕು ।
ಳ್ಳಿರಲು ಕೋರಿ ಸಿದ್ಧನವೋ ಎಸು ।
ತೊರೆದು ವಂದಿಸಿ ಬಳಿಯೊಳುತ್ತರ ಮುಖದಿ ಕುಳ್ಳಿರಲು ॥
ಭರದಿ ವಾದ್ಯಗಳಬ್ಬರಿಸಿದವು ।
ಪರಮ ಮಂತ್ರಾಕ್ಷತೆಗಳನು ತಳೆ ।
ದರು ನೆರೆದ ಗುರುಜನರು ಸಂಭ್ರಮವೇನ ಪೇಳುವೆನು ॥ ೨೧ ॥

ಅಂದುನಾಂದ್ಯಾದಿಯನು ಮಾಡುತೆ ।
ನಿಂದಿರುವ ಮಂಟಪವ ಪೂಜಿಸಿ ।
ಸುಂದರ ವಿನಾಯಕನ ಗಂಗೆಯ ಪಂಚಕಲಶಗಳ ॥
ಬಂಧುರಾಗಮ ವಿಧಿಯೊಳರ್ಚಿಸಿ ।
ಮುಂದಿರುವ ಶಿಷ್ಯನ ಕಲಶ ಜಲ ।
ದಿಂದಲಭಿಷೇಕಿಸಿದನಾಚಾರ್ಯರಪ್ರಸನ್ನತೆಯಿಂ ॥ ೨೨ ॥

ಆಗಮಾಮ್ನಾಯಗಳ ಮಂತ್ರಗ ।
ಳಾಗಳೆ ಪುರೋಹಿತರ ಮುಖದಿಂ ।
ಸಾಗಿರಲು ಶ್ರೀಭೂತಿ ಗಂಧಸುಮಾಲಿಕೆಗಳಿಂದ ॥
ಬೇಗನರ್ಚಿಸಿ ಸಕಲರುಂ ತಲೆ ।
ದೂಗಲಾಶೀರ್ವದಿಸಿ ಬಲು ಸೊಗ ।
ಸಾಗಿ ಗುರುವುಸುರಿದನು ಗುರುತನದಮಳ ಪದ್ಧತಿಯ ॥ ೨೬ ॥

ಜಗತಿಗಾಶಿವನೊಡೆಯನಾದಡು ।
ಬಗೆಯಲೆಲ್ಲಾ ಶಿಷ್ಯರಿಗೆ ಗುರು ।
ವಿಗೆ ಸಮಾನರೆನಿಪ್ಪ ಕರ್ತೃಗಳಿಲ್ಲವದರಿಂದ ॥
ಹಗಲಿರಲು ಶಿಷ್ಯರಿಗೆ ತತ್ವವ ।
ಬಗೆಬಗೆಯೊಳುಂ ತಿಳಿಸಿ ಸನ್ಮಾ ।
ರ್ಗಗಳೊಳಾಚರಿಪಂತೆ ಮಾಡುವ ಗುರುವಿಗೆಣೆಯುಂಟೆ ॥ ೨೮ ॥

ಶಿವನ ಪೂಜಿಸಿ ನೆನೆಯುತನುದಿನ ।
ಶಿವನ ಧರ್ಮಾದಿ ನಡೆದು ಶಿವ ತೀ ।
ರ್ಥವ ಪ್ರಸಾದವ ಕೊಂಡು ಶಿವಭಕ್ತರುಗಳೊಡಗೂಡಿ ॥
ಶಿವನ ಅನುಭವದಿದ್ದು ಶಿವಭಾ ।
ವವ ಬಲಿದು ಶಿವನಾದ ಗುರುವಿಗೆ ।
ಭುವನದೊಳು ಸಮನಾರು ಕೋರೀ ಸಿದ್ಧನೀ ತಿಳಿಯೈ ॥ ೨೫ ॥

ಕ್ಲೇಶಪಂಚಕವನ್ನು ನೀಗಿ ವಿ ।
ಲಾಸದಿಂ ಕಾಮಾದಿ ರಿಪುಗಳ ।
ನಾ ಸುಕರದಿ ಗೆದ್ದಾಮಲತ್ರಯ ರಹಿತನೆಂದೆನಿಸಿ ॥
ಈಶ ತತ್ವವು ಹೃದಯದೊಳಗೆ ನಿ ।
ವಾಸವಾಗಿರಲಿರಿಸಿ ಚರಣದ ।
ದಾಸರನು ಪೊರೆದಮಳ ಕೀರ್ತಿಯೊಳಾಳು ನೀನೆಂದ ॥ ೨೬ ॥

ಇತ್ತಲಾ ದಿನದಿನದಿ ಸಿದ್ಧನು ।
ಚಿತ್ರಜಾರಿಯ ಮನದಿ ನೆನೆಯುತ ।
ಬಿತ್ತರಿಪ ಜನರೊಳಗೆ ಸದ್ಗುಣ ಸುಗಮನೆಂದೆನಿಸಿ ॥
ಉತ್ತಮೋತ್ತಮ ಸುಜನ ಸಂಗವ ।
ನೊತ್ತರದಿ ಶೋಧಿಸುತಲಿರುತಿಹ ।
ಕೃತ್ತಿವಾಸನೆಯೆಂದಿಗೆಯು ಮಹಪುರುಷದೊರೆಯುವನೊ ॥ ೨೭ ॥

ಇಂತು ಪರತರ ಸಿದ್ಧಶರಣಗೆ ।
ಚಿಂತೆಯದು ಬಹಳಾಗೆ ಸದ್ಗುರು ।
ವೆಂತು ದೊರೆವನೊ । ಮೋಕ್ಷಮಾರ್ಗದ ವಿವರ ತೋರಲ್ಕೆ ॥
ಯಿಂತೆನುತ ಮನದುಗುಡವಾನುತ ।
ಭ್ರಾಂತಿಯದು ಪೆರ್ಚಿಸಿತು ಭಾವದಿ ।
ಶಾಂತಿತಾಳುತಲೊಮ್ಮೆ ಶಿವನೀ ಕರುಣಿಸೆಂದೆನುವ ॥ ೨೮ ॥

ಸಿದ್ಧನೀಪರಿ ಕಳವಳದೊಳಿರೆ ಪ್ರ ।
ಸಿದ್ಧ ತನ್ನಯ ತಿಮ್ಮಾಪುರದೊಳ ।
ಗಿದ್ಧ ಬೋರೇಗಿಡದ ಮಲ್ಲಪ್ಪೆಂಬ ನಾಮದಲಿ ॥
ಶುದ್ಧಮತಿಯುತ ವರವಿಚಾರಿಯು ।
ಸಿದ್ಧಶಾಂತ ಸುಭಾವನತಿ ಪ್ರಾ ।
ಸಿದ್ಧ ಬುಧ ಮಲ್ಲಪ್ಪ ತಾತನ ಕಂಡನೊಂದು ದಿನ ॥ ೨೯ ॥

ಕಾಣುತಾಕ್ಷಣ ಭಕ್ತಿಯಿಂದಲಿ ।
ಗೋಣುಮಣಿಸುತ ನಮಿಸಿ ಚರಣಕೆ ।
ಸ್ಥಾಣು ಸಮಗುರುವರನೆ ಯೆನ್ನಯ ಮನದ ಕಲ್ಮಷವಾ ॥
ಮಣಿಸುವುದೈ ಬಿಡದೆ ತನಯನ ।
ಕ್ಷೀಣತಮಗುಣ ಯೆಣಿಸದೀಕ್ಷಣ ।
ಪ್ರಾಣ ಪಂಚವನರ್ಪಿಸಿರುವೆ ಮುಮುಕ್ಷು ಮನದಿಂದಾ ॥ ೩೦ ॥

ಈ ಪರಿಯೊಳ್ ಸಿದ್ಧೇಶ ವಚಿಸಲು ।
ತಾಪಹರ ಮಲ್ಲಪ್ಪ ತಾತನು ।
ಪಿರಿದು ನುಡಿದನು ಮಗನೆ ನಿನ್ನಯ ಭವದ ಬೇರ ॥
ಲೋಪಿಸುವ ಸಮಯದುವೆ ವದಗಿದೆ ।
ರೂಪಿಸುವೆ ಮಹಗುಪ್ತ ವಿಷಯ ।
ಪ್ರದೀಪಗೊಂಬುದು ಭವತಮವು ಬೇಗನೆಸು ಸತ್ಯವಿದು ॥ ೩೧

ಶುಚಿಮನನಿ ನೀ ಸಿದ್ಧ ಕೇಳ್ ಶ್ರುತಿ ।
ನಿಚಯಸಾರವ ಪೇಳ್ವೆ ವಿವರದಿ ।
ಅಚಲಿತಾನಂದವದು ನೆಲೆಸುವುದಿರದೆ ಹೃದಯದಲಿ ॥
ರುಚಿಪುದೈ ಜ್ಞಾನಾಮೃತವನಖ ।
ಕಚನ ಕರುಣವ ತೋರಲಿಕ್ಕಿದು ।
ವುಚಿತವಾಗಿರುತಿಹುದು ಅರಿಯೈ ಮಗವೆ ನೀನೆಂದಾ ॥ ೩೨

ಹೀಗೆನಲು ಮಲ್ಲಪ್ಪ ತಾತನು ।
ಆಗಲಾಲೋಚಿಸುತ ಸಿದ್ಧನು ।
ಶ್ರೀಗುರುವೆ ಕೃಪೆವೆರಸಿಯೆನ್ನೊಳ್ ಶಾಂತಭಾವದೊಳು ॥
ಆಗಮದ ಶಿರಭಾಗದೊಳು ತಾ ।
ಮೇಗೆನಿಪ ಮಹತತ್ವ ಜ್ಞಾನವ ।
ನೀಗಲರುಪುತ ಧನ್ಯನನು ಮಾಡುವದು ಕರುಣದಲಿ ॥ ೩೩

ಆದರೆಲೆ ಮಗು ಕೇಳು ನಿನ್ನಗೆ ।
ಆದರಿಸಿ ಮಹವೇದ ಸಾರವ ।
ಬೋಧಿಸಲು ಬಲು ಗೋಪ್ಯವಾಗಿಹ ಸ್ಥಲವು ಬೇಕಿದಕೆ ॥
ಭೇದಭಾವದ ಜನರ ಸಂಗದಿ ।
ಸಾಧಿಸದು ಈ ವಿಷಯ ಸಂಗ್ರಹ ।
ಆದಕಾರಣ ಗ್ರಾಮಬಿಟ್ಟೇಕಾಂತ ಸೇರುವದು ॥ ೩೪

ತಂದೆಗುರು ಮಲ್ಲಪ್ಪ ತಾತನು ।
ಅಂದು ನುಡಿಗೊಪ್ಪುತಲಿ ಸಿದ್ಧನು ।
ಮುಂದುಯೋಚನೆಗೈದು ನಡೆದರು ಗ್ರಾಮದಾ ಬಳಿಯೊಳ್ ॥
ಹೊಂದಿಕೊಂಡಿಹ ಗಿರಿಪ್ರದೇಶದಿ ।
ಅಂದಗೊಂಡಿಹ ಕೊಳಲ ತಡಿಯಲಿ ।
ಬಂದುನೋಡಿದರದರ ಸಿಂಗರ ನಲಿದು ತಲೆದೂಗಿ ॥ ೩೫ ॥

ಅಂಚೆಯಿಂಡುಗಳಾಡ್ವ ಸೊಬಗು ಪ ।
ಳಂಚಿ ಸುಳಿವಾ ಭೃಂಗಜಾಲವು ।
ಮಿಂಚುವಡೆದಿಹ ತರುಲತಾದಿಗಳಿರುವಿನಿಂ ಮೆರೆಯೆ ॥
ಪಂಚವರ್ಣದ ಶುಕಪಿಕಂಗಳ ।
ಸಂಚಯವು ಪೊಣ್ಮುತಲಿ ಮನದಾ ।
ವಾಂಛಿತವ ಪೂರ್ಣಿಸುವ ಸರಸಿಯ ಸೊಬಗ ನೋಡಿದರು ॥ ೩೬ ॥

ಮೆರೆಯುವಾಪರ ಗಿರಿಯ ತಟದಲಿ ।
ಪರಮ ನಿರ್ಮಲವಾದ ಗವಿಯನು ।
ಗುರುವರನು ತಾ ಪೊಕ್ಕು ನೋಡಿದನಾಗ ಮನದೊಳಗೆ ॥
ಹರುಷವಾಂತುಂ ಮಾತನಾಡಿದ ।
ಇರಲು ಈ ಸ್ಥಲಯೋಗ್ಯಮಪ್ಪುದು ।
ಜರುಗಿಸುವ ಪ್ರತಿದಿನದಿ ಅನುಭವ ವಿಷಯವಿಂತೆಂದರ್ ॥ ೩೭ ॥

ಗುರುವೆ ನೀ ದಯದಿಂದ ಪೇಳ್ಕೈ ।
ಉರುತರದ ಗುರುಶಿಷ್ಯ ಲಕ್ಷಣ ।
ದಿರವ ವಿವರದಿಯೆಂದು ಚರಣಕೆ ನಮಿಸಿ ಬೆಸಗೊಂಡ ॥
ಹರುಷದೊಳು ಮಲ್ಲಪ್ಪ ತಾತನು ।
ಪರಮ ಶ್ರೀಗುರು ಶಿಷ್ಯ ಲಕ್ಷಣ ।
ಅರುಹಿದನು ಸಂಕ್ಷಿಪ್ತ ರೂಪದಿ ತರುಳಸಿದ್ಧನಿಗೆ ॥ ೩೮ ॥

ತಾಪತ್ರಯದಲಿ ಬೆಂದು ಬಳಲುತ ॥
ಪಾಪಮೋಹವ ನಂಬಿ ನೆಚ್ಚುತೆ ।
ಪೋಪಘನತರ ಜನನ ಮರಣದ ಬಂಧದಲಿ ಸಿಲುಕಿ ॥
ಲೇಪಗೊಂಡಿರುವಖಿಲ ವಿಷಯದ ।
ರೂಪು ತಾನಡಗಿಸುತಲಾತ್ಮ ಪ್ರ ।
ದೀಪತೋರಿಸುವಾತನೇ ಸದ್ಗುರುವು ಕೇಳೆಂದಾ ॥ ೩೯ ॥

ಬಾಲತಿಳಿ ತನುಮಾಂಸ ಮಲಗಳ ।
ಚೀಲವಿದುಯುರೆಹೇಯ ವಿದರಾ ।
ಮೇಲಣಾಶಯ ತ್ಯಜಿಸು ನೀ ಪರಬ್ರಹ್ಮನಾಗುವಿಯೋ ॥
ಕಾಲಗತಿಗೀಡಾದ ಗಾತ್ರವು ।
ಕಾಲಹರನೀ ನೊದಲೆಯೆಂಬುವ ।
ಮೂಲನರುಪುವ ಪುರುಷನೇ ಸದ್ಗುರುವು ಕೇಳೆಂದ ॥ ೪೦ ॥

ದಿಟ್ಟಿಯಿಡಿಸುತ ನಾಸಿಕಾಗ್ರದಿ ।
ಥಟ್ಟನೇ ಚಿತ್ರಭೆಯ ತೋರಿಸಿ ।
ಕೆಟ್ಟಳಿಲ್ಲದನೇಕ ಸ್ವನವನು ಕಿವಿಗೆ ಕೇಳಿಸುತ ॥
ಮುಟ್ಟಿ ಷಣ್ಮುದ್ರೆಯನು ತಿಳುಪುತ ।
ಬಟ್ಟೆ ಬಯಲೊಳು ಸುಧೆಯ ಕುಡಿಸುವ ।
ದಿಟ್ಟನೇ ಸದ್ಗುರುವು ನೀ ತಿಳಿಯೆಂದ ಮಲ್ಲಾಖ್ಯ ॥ ೪೧ ॥

ವಾಯು ಬಿಡಿಸುತ ದಳವನಿಡಿಸುವು ।
ಪಾಯದಲಿ ಷಟ್ಚಕ್ರ ಕ್ರಮಿಸಿಯೆ ।
ಮಾಯ ಜಂಜಡ ಹರಿಸಿ ಪರಮನ ರೂಪು ನೀನೆನಿಸಿ ॥
ಬೇಯಿಸಿಯೆ ತನುಗುಣವ ಶಿವನಾ ।
ಛಾಯ ತೋರಿಸುತಿರುತಿಹನೆ ತಾ ।
ಜೀಯ ಸದ್ಗುರುವೆಂದು ಭಾವಿಸು ಮಗನೆ ಕೇಳೆಂದ ॥ ೪೨ ॥

ಮತ್ತೆ ಕೇಳೈ ಸುಗುಣ ಸಿದ್ಧನೆ ।
ವುತ್ತಮೋತ್ತಮ ನಡತೆಯಿಂದಲಿ ।
ನಿತ್ಯಸುಖ ಪರಿಪೂರ್ಣನಾಗಿರುತಿಹನು ನೋಡಲ್ಕೆ ॥
ಅತ್ಯಧಿಕ ಗುಣಶಾಂತಿ ಶಮದಮ ।
ವೊತ್ತವೆರಸುತ ಚರಿಸುತಿಹನೈ ।
ಸತ್ಯಸದ್ಗುರುವೆನಿಪ ಲಕ್ಷಣವಿಂತಿಹುದು ಯೆಂದ ॥ ೪೩ ॥

ದುರುಳ ಗುರುಗಳ ಲಕ್ಷಣವನಾ ।
ಸರುಪುವೆನು ಸಂಕ್ಷಿಪ್ತ ರೂಪದಿ ।
ಚರಿಸುತಿಹರೈ ಡಂಭವೇಷವ ಧರಿಸಿ ಲಿಂಗದೊಳು ॥
ಪರಿಪರಿಯ ಶ್ರುತಿ ವಚನವುಸುರುವ ।
ರರಿಯದಲೆ ತಾವ್ ಆತ್ಮದಿರುವನು ।
ಮರುಳುಗೊಳಿಪರು ವನಪು ವಾಕ್ಯದಿ ಜಗವ ಕೇಳೆಂದ ॥ ೪೪ ॥

ಆಶೆರ್ಣೀವ್ಗಳು ಬಿಡಿರಿ ಯೆಂಬರು ।
ಆಶೆಯೊಳು ತಾವ್ ಮುಳುಗಿಯಿರ್ಪರು ।
ಕಾಸಗಳ ಕೂಡಿಸುವರೈ ನವನವೇಷಗಳ ತಾಳ್ದು ॥
ದೇಶದೇಶವ ತಿರುಗಿ ಜಠರದ ।
ಪೋಷಣೆಯ ಮಾಡುವರು ಕುಹಕದಿ ।
ಯೇಸುಪೇಳಲಿ ದುರಿತಗುರುಗಳ ಸಂಗತಿಯನೆಂದ ॥ ೪೫ ॥

ಈ ಪರಿಯಲಿಹ ದುಷ್ಟಗುರುಗಳ ।
ರೂಪು ನೋಡಲು ಸಂಗಮಾಡಲು ।
ಲೇಪವಹುದೈ ಪಾಪಪುಂಜವು ತರುಳ ಕೇಳೆಂದ ॥
ಆ ಪರಮ ವಚನಗಳ ಕೇಳಿ ನಿ ।
ರೂಪಿಸೈ ಯೆನಗೀಗ ದಯದಲಿ ।
ತಾಪಹರ ಸಚ್ಛಿಷ್ಯ ಲಕ್ಷಣವೆನ್ನಲಾ ಸಿದ್ಧ ॥ ೪೬ ॥

ಕೇಳುತೀ ವಾಕ್ಯವನು ಗುರುವರ ।
ಮೇಲು ತೋಷವನಾಂತು ಹೃದಯದಿ ।
ಪೇಳುವೆನು ಸಚ್ಛಿಷ್ಯ ಲಕ್ಷಣ ಕೇಳು ಮನವಿಟ್ಟು ॥
ಖೂಳ ಕುಹಕರಿದೇನು ಬಲ್ಲರು ।
ಆಲಸಿತ ಸಚ್ಛಿಷ್ಯ ಲಕ್ಷಣ ।
ಬಾಲ ತಿಳಿನೀನರಿದು ಬಾಳೈ ಸತತ ಧರಣಿಯಲೀ ॥ ೪೭ ।

ಅನ್ಯಜನಗಳಪೇಕ್ಷೆಯಿಲ್ಲವು ।
ಖಿನ್ನಬುದ್ಧಿಯು ಯೆಂಬುದಿಲ್ಲವು ।
ಚೆನ್ನಸೊಗಸಹಂಕಾರ ಬಡಿವಾರಗಳು ಯೇನಿಲ್ಲ ॥
ಬನ್ನ ಹರುಷದಗೊಡವೆಯಿಲ್ಲವು ।
ತನ್ನೊಳಗೆ ತಾ ಸುಖಿಪನನುದಿನ ।
ಮಾನ್ಯಗುರುವಿನ ಸೇವೆ ಮಾಳ್ಪನು ಯಿಂತಿಹನೆ ಶಿಷ್ಯ ॥ ೪೮ ।

ತನುಮನೋವಿತ್ತೆಂಬ ಕಾಂಕ್ಷೆಯು ।
ತನಗೆ ಲೇಪವದಿಲ್ಲವೆನುತಂ ।
ಮನದ ಸುಖದಿಂ ವಿವಿಧ ಮೋಹವು ಜನಿಸುತಿಹುದೆಂದು ॥
ಸನುಮತಿಸಿ ತನ್ನಂತರಂಗದಿ ।
ನನಗೆಕೀಳ್ಮನದೆರಕವಿಲ್ಲವು ।
ಯಿನಿತು ಗುರುವಿನದೆಂದರಿವ ಸಚ್ಛಿಷ್ಯ ಕೇಳೆಂದ ॥ ೪೯ ।

ಮನೆಯ ಮಮತೆಯನಳಿಯಬಹುದೈ ।
ಧನದಕಾಂಕ್ಷೆಯ ತ್ಯಜಿಸಬಹುದೈ ।
ಘನತರದ ಭೂಮಿಯನು ಸತಿಸುತರನ್ನು ಕೊಡಬಹುದು ॥
ಮನವ ಕೊಡುವದಶಕ್ಯತನವೈ ।
ಮನವ ಕೊಡುತಿರುವವನೆ ಶಿಷ್ಯನು ।
ನಿನಗದೇಂ ಪೇಳುವೆನು ಶಿಷ್ಯನ ಚರಿತೆಯನು ಯೆಂದ ॥ ೫೦ ।

ಇನಿತು ಗುರು ಮಲ್ಲಾಖ್ಯ ತಾತನು ।
ಸನುಮತದಿ ಬೋಧಿಸಿದ ತರುಳಗೆ ।
ಘನತರದ ಗುರುಶಿಷ್ಯ ಲಕ್ಷಣ ವಿವರ ಪಾಙ್ತದಲಿ ॥
ಅನುನಯದಿ ವರಸಿದ್ಧ ಶರಣನು ।
ಯೆನಿತು ಭಾಗ್ಯನೊ ನಾನು ಭುವನದಿ ।
ಯೆನುತ ಗುರುಪದಕೆರಗಿ ಶಾಂತದಿ ಮೌನಗೊಂಡಿರ್ದಂ ॥ ೫೧ ॥

ಪರಮತರದೀ ಯತಿಪುರಾಣವ ।
ನುರುಮುದದೊಳೋದುವರಿಗಂ ಪೇ ।
ಳ್ವರಿಗೆ ಆಲಿಸುವರಿಗೆ ಸದ್ಗುರು ಕೋರಿಸಿದ್ಧೇಶಂ ॥
ಚಿರತರಾಯುರರೋಗ್ಯವೈಸಿರಿ ।
ಪರಮವಿದ್ಯೆ ಸುಭಕ್ತಿವೊದಲಾ ।
ಗಿರುವ ಸತ್ಫಲಗಳನು ಕರುಣಿಸುತಿರ್ಪ ನಿದುದಿಟವು ॥ ೫೨ ॥

ಅಂತು ಸಂಧಿ ನಾಲ್ಕಕ್ಕಂ ಪದನು ೧೨೫ ಕ್ಕಂ ಮಂಗಲಂ ಮಹಾ

ಶ್ರೀ ಶ್ರೀ ಶ್ರೀ

॥ ಶ್ರೀಗುರು ಕೋರಿ ಸಿದ್ಧೇಶ್ವರಾಯನಮಃ ॥



# ಐದನೆಯ ಸಂಧಿ

ಸೂಚನೆ— ಶಿವನ ಸಮ ಮಲ್ಲಪ್ಪ ತಾತನು ।
ವಿವಿಧವಾಗಿಹ ನೀತಿ ಶಾಸ್ತ್ರವ ।
ಜವದಿ ತಿಳಿಸಲು ಸಿದ್ಧ ಶರಣನು ತೋಷದಿಂ ನಲಿದ ॥

ನಿಖಿಲಶ್ರುತಿ ಶಾಸ್ತ್ರಾಗಮಂಗಳ ।
ನಿಕರಪೊಗಳುತ ಮೇರೆಯದು ತಾ ।
ಪ್ರಕಟವಾಗದೆ ವಾಙ್ಮನಕಗೋಚರನುಮಾಗಿರ್ಪ ॥
ಸಕಲ ಸೃಷ್ಟಿಗೆ ವೊಡೆಯನಾದಾ ।
ಭಕುತನಿಕರಕೆ ವರದನೆನಿಸಿದ ।
ಮುಕುತಿದಾಯಕ ಶಂಭುದಯದಿಂ ರಕ್ಷಿಪುದು ಸತತ ॥೧॥

ಸಂದ ಶ್ರೀ ಶಿವಶರಣ ಸಿದ್ಧನು ।
ವಂದಿಸುತ ಗುರುಪದಕೆ ಮುದಮನ ।
ದಿಂದ ಪ್ರಾರ್ಥನೆಗೈದು ಬೆಸಸಿದನೊಂದು ವಿಷಯವನು ॥
ತಂದೆ ತಿಳುಹೈ ಯೆನಗೆ ದಯದೊಳು ।
ಚಂದವಡೆದಿಹ ನೀತಿಶಾಸ್ತ್ರವ ।
ಸಂದೆಗವದಿಲ್ಲದೊಲು ಮನಮುಟ್ಟುವೊಲು ವಿವರದೊಳು ॥೨॥

ಬಾಳವಿನಯದಿ ಬೇಡಿಕೊಂಬುವ ।
ಬಾಲಸಿದ್ಧನ ಭಕ್ತಿಗೊಲಿಯುತ ।
ಕೇಳ್ಮಗನೆ ನಿನಗಾವ ಸಂಶಯ ಬಂದ ಸಂಗತಿಯ ॥
ಪೇಳುವೆನು ವಿವರದೊಳು ಬಿಡದುರು ।
ಕೇಳಿ ಸಾಧಿಸು ಶುದ್ಧಹೃದಯದಿ ।
ನೀಲಗ್ರೀವನ ಚರಣಕರುಣಕೆ ಪಾತ್ರನಾಗೆಂದ ॥ ೩ ॥

ಧೀರನಾರು ವರಿಷ್ಠನಾರು ವಿ ।
ಕಾರಿಯಾರು ವಿನೀತನಾರಾ ।
ಚಾರಹೀನನು ಯಾರುಸುವ್ರತನಾರು ಶಠನಾರು ॥
ಕ್ರೂರನಾರತಿ ಕಷ್ಟನಾರು ವಿ ।
ಚಾರಿಯಾರು ಸಮುಕ್ತನಾರು ವಿ ।
ದೂರನಾರಿಹ ಪರಕೆ ಗುರುವರ ಪೇಳು ನೀನೆಂದ ॥ ೪ ॥

ನಾರಿಯರ ಕಡೆಗಣ್ಣ ಹೊಯ್ಲಿನ ।
ಧಾರೆಗಳುಕದನಾವನಾತನೆ ।
ಧೀರತರದ ವರಿಷ್ಠನಬಲೆಯ ಹುಬ್ಬುಗಳ ಕಂಡು ॥
ಮೇರೆದಪ್ಪುವನವ ವಿಕಾರಿ ವಿ ।
ಚಾರ ಪರನೆ ವಿನೀತನನ್ಯಾ ।
ಚಾರಿಯುತನಾಚಾರ ಹೀನನು ಮಗನೆ ಕೇಳೆಂದ ॥ ೫ ॥

ಸತತವಾತ್ಮಧ್ಯಾನದಿರುವನೆ ।
ವ್ರತಮುಮುಕ್ಷು ವಿಚಾರಯುಕ್ತನು ।
ಕೃತಕನೇ ಶಠನ ಪ್ರಗಲ್ಭ್ಯ ಕೃತಘ್ನನೇ ಕ್ರೂರ ॥
ಅತಿ ಜಿಪುಣನೇ ಕಷ್ಟನಾತ್ಮದಿ ।
ರತನೆ ಮುಕ್ತನು ವೇದಮಾರ್ಗ ।
ಚ್ಯುತನೆ ಲೋಕದ್ವಯವಿದೂರನು ಸುತನೆ ಕೇಳೆಂದ ॥ ೬ ॥

ಆರು ಭಂಡರು ಸುಜನ ನಿಂದ್ಯರು ।
ಆರು ಹಾಲಾಹಲಸ್ವರೂಪರು ।
ಆರು ಸಾಹಸಿಯಾರು ಸಜ್ಜನನಾರು ಶುಚಿಯಾರು ॥
ಆರು ಗೆಳೆಯರು ಆರು ಸೇವ್ಯರು ।
ಆರು ದುರ್ಬಲರಾರು ದುಸ್ಸಹ ।
ರಾರು ದುರ್ಮತಿಯಾರು ಗುರುವರ ಪೇಳ್ವುದೆನಗೆಂದ ॥೭

ವ್ಯಸನಿ ನಿಂದ್ಯನು ರಣದೊಳೊಡೆಯನ ।
ಬಿಸುಟ ಪೋಪನೆ ಭಂಡನತಿ ಸಾ ।
ಹಸಿಕನೇ ಸೇವಕನು ಮಿತ್ರವಿಘಾತಕನೆ ವಿಷವು ॥
ಪಿಸುಣನೇ ಹಗೆಪರಸತಿಗೆ ಮನ ।
ಮಿಸುಕದವನೇ ಶುಚಿಪರಾರ್ಥ ।
ವ್ಯಸನಹರ ಸಜ್ಜನನು ಕೇಳೈ ಶರಣ ಸಿದ್ಧೇಶ ॥೮

ವಿನುತ ಪರ ತತ್ವಜ್ಞನತಿ ಸೇ ।
ವ್ಯನುಸುದುರ್ಲಭನೇ ಜಿತೇಂದ್ರಿಯ ।
ನನುಗುಣನೆ ಸಖನಾರ ಸೈರಿಸದವನೆ ದುಸ್ಸಹನು ॥
ತನಯ ತಿಳಿನೀ ಕೇಳ್ದ ಪ್ರಶ್ನೆಯ ।
ನನುಸರಿಸಿ ವುಸುರಿದೆನು ಮತ್ತೆಯು ।
ನಿನಗೆ ಸಂಶಯ ಬಂದ ವಿಷಯವ ಕೇಳಿಕೋ ಎಂದ ॥೯

ದೇವ ತಿಳುಹೈ ಯೆನಗೆ ಮತ್ತೆಯು ।
ಭೂಮಿಯೊಳ್ನೆಲೆಸಿರುವ ಮಾನವ ।
ಜೀವರಾಶಿಯ ಆಯುವೃದ್ಧಿಯು ಕ್ಷೀಣವಾಗುವದು ॥
ಈ ವಿಚಾರವನರುಹು ಯೆಂದೆನೆ ।
ಸಾವಧಾನದಿ ಕೇಳೆನುತ್ತಲಿ ।
ದೇವಪ್ರಿಯ ಮಲ್ಲಪ್ಪ ತಾತನು ಪೇಳ್ದ ಸಿದ್ಧನಿಗೆ ॥೧೦

ಅಳಿವತರಣಿಯ ಕಿರಣದಲಿ ನಿ ।
ರ್ಮಲದ ಜಲದಲಿ ದುಗ್ಧಪಾನಂ ।
ಗಳಲಿವರಯುವತಿಯರ ಸಂಭೋಗಾಂತರಂಗದಲಿ ॥
ತಳಿತಹೋಮದ ಪೊಗೆಗಳಲಿ ತನು ।
ಬಲದೊಳಾಯುಷ್ಯಾಭಿವೃದ್ಧಿಯ ।
ಬೆಳವಿಗಿಗೆ ಕಾರಣವು ತಿಳಿಯೈ ಸಿದ್ಧ ನೀನೆಂದ ॥ ೧೧

ಎಳೆರವಿಯ ರಶ್ಮಿಯಲಿ ಪ್ರೇತಂ ।
ಗಳ ಕುಧೂಮ ಜ್ವಾಲೆಯಲಿ ಗಾ ।
ವಿಲವಯೋವೃದ್ಧೆಯರ ಸಂಭೋಗಾಂತರಂಗದಲಿ ॥
ಕೊಳಚೆನೀರಿನ ಬಳಕೆಯಲಿ ಕ ।
ತ್ತಲೆಯೊಳ್ದಧ್ಯೋದನದ ಲಾಯುವು ।
ಅಳಿದು ಪೋಪುದು ದಿನದಿನದೊಳಿಂತೆಂದ ಗುರುವರನು ॥ ೧೨ ॥

ಮಸುಳಿದದುಕೂಲಂಗಳಾನುತ ।
ಪಸರಿಸುವದಂತಗಳು ಮಲಿನಿರೆ ।
ಗಸಣೆನಿಷ್ಠುರ ವಾಕ್ಯದಿಂ ಉದಯಾಸ್ತ ಸಮಯದಲಿ ॥
ಎಸಗಿ ನಿದ್ರಾಂಗನೆಯೊಳೊಂದಿರೆ ।
ಬಿಸಜಲೋಚನನಾದಡೆಯು ವ ।
ರ್ಜಿಸುವಳವನನು ಭಾಗ್ಯದೇವತೆ ಕೇಳು ಸಿದ್ಧೇಂದ್ರ ॥ ೧೩ ॥

ಮತ್ತೆ ತಿಳಿಸುವೆ ಕೇಳು ನಿನಗಾ ।
ಉತ್ತಮೋತ್ತಮ ನೀತಿ ಬೋಧವ ।
ಸ್ತುತ್ಯವಹ ಘನಬ್ರಹ್ಮಜ್ಞಾನವ ಕೇಳ್ದ ನಿಮಿಷಕ್ಕೆ ॥
ಚಿತ್ತವಿಟ್ಟಾಲಿಸಿದ ಮನುಜನು ।
ನಿತ್ಯಮಂಗಲನಾಗುತಿಹನೈ ।
ಸತ್ಯವೈ ಸಟೆಯಲ್ಲ ಯೀನುಡಿ ನಂಬು ನೀನೆಂದ ॥ ೧೪ ॥

ತ್ಯಜಿಸುವುದು ದುಸ್ಸಂಗವನು ನೀ ।
ಸೃಜಿಸುವುದು ಸತ್ಸಂಗವನು ಗಜ ।
ಬಜಿಸದೆ ಅಹೋರಾತ್ರಿಯಲಿ ಧರ್ಮವನೆ ಸಂಗ್ರಹಿಸು ॥
ಭಜಿಸು ನಿತ್ಯದಿ ನಿತ್ಯವಸ್ತುವ ।
ವಿಜಯವಿದು ಯಿಹಪರಕೆ ತತ್ವದ ।
ನಿಜವಿದ್ಯೆ ಸಿದ್ಧೇಂದ್ರ ಶರಣನೆ ಕೇಳು ನೀನೆಂದಾ ॥ ೧೩ ॥

ಕಾಯವಿದು ಸ್ಥಿರವಲ್ಲ ಸಿರಿತಾ ।
ಮಾಯರೂಪಿದು ಮೃತ್ಯುದೇವತೆ ।
ಬಾಯಿಬಿಡುತಿಹಳಾವುದೀತನ ಕಾಲಗತಿಯೆಂದು ॥
ಆಯುವರಿದಾ ಮಹಾತ್ಮರಿದಕೆ ಸ ।
ಹಾಯ ಧರ್ಮವ ರಚಿಸಿ ಸುಲಭೋ ।
ಪಾಯದಿಂ ಶ್ರೀ ಮೋಕ್ಷರಾಜ್ಯವು ದೊರೆಯುವೊಲು ಗೈವರ್ ॥ ೧೭ ॥

ಕೆಟ್ಟವಿಷಯದ ಇಂದ್ರಿಯಂಗಳ ।
ಬಿಟ್ಟು ಮದದಾಟದಲಿ ಮನ ಸಂ ।
ದಪ್ಪನಾಗಿಯೆ ನಿತ್ಯ ಸಂಸಾರದ ಸುಖಕ್ಕೆಳಸಿ ॥
ಹುಟ್ಟು ಸಾವಾಗದಲೆ ಮಿಗೆ ಕಂ ।
ಗೆಟ್ಟು ನಾನಾ ಯೋನಿಯಲಿ ಕಡು ।
ಕಷ್ಟಬಡುವುದು ವುಚಿತವೇ ಸಿದ್ಧೇಂದ್ರ ಕೇಳೆಂದ ॥ ೧೮ ॥

ಒಂದುವಸ್ತುವನೆರಡು ಮಾಡುವ ।
ನೆಂದು ಬುದ್ಧಿಭ್ರಂಶೆಯಲಿ ಮನ ।
ಸಂದು ಸಮ್ಯಜ್ಞಾನದುದಯದ ನೆಲೆಯ ಕಾಣದಲೆ ॥
ದಂದುಗಂ ಬಡುತಿಹರು ತತ್ವದ ।
ಹಿಂದುಮುಂದರಿಯದಲೆ ಮಹಾತ್ಮರು ।
ಬಂದ ಪಥದಲಿ ಬಾರದಲೆ ಕೆಡುತಿಹುದು ಜಗವೆಲ್ಲ ॥ ೧೯ ॥

ಸಕಲ ಧರ್ಮದ ಸಾರವನು ಮತಿ ।
ವಿಕಳವಾಗದೆ ಚಿತ್ತವಿಸು ಬಾ ।
ಥಕವದಾವುದು ನಿನಗದನು ನೀನನ್ಯರುಗಳಲ್ಲಿ ॥
ಮುಕುತಿಯಿಂದದನೆಸಗದಿರು ನೀ ।
ವಿಕಟವಹ ಸಂಸಾರದಲಿ ಸಾ ।
ಧಕವಿದೊಂದೆ ಸಕಲ ಮುನಿಮತವೆಂದ ಗುರುರಾಯ ॥ ೧೯ ॥

ಹಲವು ಬಣ್ಣದೊಳೆಸೆವ ಗೋಸಂ।
ಕುಲದೊಳೊಂದೇ ವರ್ಣದಲಿ ಕಂ ।
ಗೊಳಿಪ ಕ್ಷೀರಾಮೃತದ ತೆರನಂತಿರದೆ ಮೈಗೊಂಡು ॥
ಹೊಲಬುಗೆಟ್ಟು ಚರಾಚರಂಗಳ ।
ಸುಳಿವಿನಲಿ ಸುಳಿದಡಗಿ ಕಡೆಯಲಿ ।
ನಿಲವು ನಿಜವಂದಲ್ಲದಲೆ ಯೆರಡಿಲ್ಲ ಸಿದ್ಧೇಂದ್ರ ॥ ೨೦ ॥

ಅತಿಶಯದ ಪುಣ್ಯವನು ವಿರಚಿಸಿ ।
ಗತಿವಡೆದು ಸ್ವರ್ಗಾದಿ ಭೋಗೋ ।
ನ್ನತಿಯ ಮಿಗೆಭೋಗಿಸಿದನಂತರದೀ ಧರಾತಳದೆ ॥
ಪತನತಪ್ಪದು ಮರಳಿ ಬಾರದ ।
ಮತವನರಿದು ಮಹಾನುಭಾವರ ।
ಗತಿವಿಡಿದು ನಡೆಯುವದೆ ಲೇಸ್ಸೆ ಮಗನೆ ಕೇಳೆಂದ ॥ ೨೧ ॥

ನಳಿನಮಿತ್ರನು ಪಶ್ಚಿಮಾಂಬುಧಿ ।
ಗಿಳಿದು ಪೋಗಲು ಪಕ್ಷಿಗಳು ತಾವ್ ।
ವುಲಿವುತ್ತೈತಂದೊಂದು ವೃಕ್ಷವನೇರಿ ರಜನಿಯನು ॥
ಕಳೆದು ನಾನಾ ಕಡೆಗೆ ಹರಿವೊಲು ।
ಅಳಿವ ಭೋಗದ ಫಲವು ತೀರಲು ।
ಬಳಿಕ ಲೋಕಾಂತರವನೈದುವರೆಂದ ಮಲ್ಲಾಖ್ಯ ॥ ೨೨ ॥

ಸ್ವರ್ಗವಾವುದು ನಿರಯವಾವುದು ।
ಶೀಘ್ರದಾಗುವ ಸಿದ್ಧಿಯಾವುದ ।
ನುಗ್ರಹಿಸಲೇನಹುದು ಪಾತ್ರಾಪಾತ್ರವದು ಯೇನು ॥
ಉಗ್ರವಾವುದು ದೈವದೊಳಗೆ ಸ ।
ಮಗ್ರವಾವುದು ಧರ್ಮದೊಳಗಿದ ।
ಶೀಘ್ರದಿಂದಲಿ ತಿಳಿದನುಗ್ರಹಿಸುವುದು ಲೇಸೆಂದ ॥ ೨೩ ॥

ಸುಲಭನತಿ ಸಾಹಿತ್ಯ ಮಂಗಲ ।
ನಿಳಯನಗಣಿತ ಮಹಿಮನನ್ವಯ ।
ತಿಲಕನನುಪಮ ಚರಿತದೈವಾಸಕ್ತ ಪುಣ್ಯನಿಧಿ ॥
ಕುಲಯುತನು ಕೋವಿದನು ಕರುಣಾ ।
ಜಲಧಿಕೌತುಕ ಯುಕ್ತಿಯುತನೆಂ ।
ದಿಳೆಪೊಗಳುತಿರಲದುವೆ ಸ್ವರ್ಗವದೆಂದು ತಿಳಿಯುವದು ॥ ೨೪ ॥

ಪಾತಕನು ಪತಿತನು ಕೃತಘ್ನನು ।
ಘಾತಕನಧರ್ಮನು ದುರಾಢ್ಯನು ।
ಭೂತಸಮನುರೆ ದೂಷಕನು ದುರ್ಜನಪ್ರಯೋಜಕನು ॥
ನೀತಿರಹಿತನು ಜಾತಿಧರ್ಮವ ।
ನೋತು ತ್ಯಜಿಸಿಹನೆನಿಸಿಕೊಳ್ವದೆ ।
ಭೂತಲದೊಳಿದು ನರಕವೆಂದರಿಯುವುದು ಸಿದ್ಧೇಂದ್ರ ॥ ೨೫ ॥

ದೇಹವಿಡಿದಿರೆ ಕರ್ಮವದು ನಿ ।
ರ್ದೇಹದಲಿ ದೊರಕುವದೆ ಮಾನವ ।
ದೇಹವೇ ಸಾಧನವದೈ ಪುರುಷಾರ್ಥ ಶೀಲರಿಗೆ ॥
ಸೋಹಮಸ್ಮಿಬ್ರಹ್ಮಗತಿ ಸಂ ।
ಮೋಹಿಸುವುದು ಶರೀರವಲಿ ಸಂ ।
ದೇಹವಿಲ್ಲೆಯೆಂದು ಪುಸುರಿದ ಶರಣಸಿದ್ಧನಿಗೆ ॥ ೨೬ ॥

ಗರುಡಪಂಚಾಕ್ಷರಿಯೊಳಲ್ಲದೆ ।
ಉರಗಭಯವಡಗುವದೆ ದೇವ ।
ಸ್ಮರಣೆಯಲಿ ಅಡಗುವದು ಬಹುತರ ಪಾತಕವು ಸತ್ಯ ॥
ಪಿರಿದು ಸಂಸಾರಾಂಬುಧಿಯನು ।
ತ್ತರಿಸುವರೆ ಗುರುಮುಖದೊಳಲ್ಲದೆ ।
ಯಿರದು ಬೇರಿನ್ನಾವ ಯುಕ್ತಿಯು ತರುಳ ಕೇಳೆಂದ ॥ ೨೭ ॥

ತನ್ನ ಗೃಹದೊಳು ಮೂರ್ಖ ಪೂಜ್ಯನು ।
ಯಿನ್ನು ಪೂಜ್ಯನು ಧರಣಿಪಾಲನು ।
ತನ್ನರಾಜ್ಯದಲಧಿಕ ಸ್ವಗ್ರಾಮದಲಿ ಪ್ರಭುಪೂಜ್ಯ ॥
ಭಿನ್ನವಿಲ್ಲದೆ ಪೋಷಿ ತಾವಿನೊ ।
ಳನ್ಯನೆನಿಸದೆ ವಿಶ್ವದೊಳು ಸಂ ।
ಪನ್ನ ಪೂಜ್ಯಕೆ ಪಾತ್ರರ್ಕೈ ವಿದ್ವಾಂಸರುಗಳೆಂದ ॥ ೨೮ ॥

ಒಬ್ಬನಹನ್ನೈ ಶೂರನೂರರೊ ।
ಳೊಬ್ಬನಹ ಸಾವಿರಕೆ ಪಂಡಿತ ।
ನೊಬ್ಬನಹನ್ನೈ ವಕ್ತೃ ಶತಸಾವಿರಕೆ ಲೋಕದೊಳು ॥
ವಬ್ಬದಾನಿಯು ಕಾಣೆನಿನ್ನೊ ।
ಬ್ಬಬ್ಬರಿಗೆ ವೊಂದೊಂದು ಗುಣವೈ ।
ಸಬ್ಬಗುಣ ಸಂಪನ್ನರ್ಕೈ ವಿದ್ವಾಂಸರುಗಳೆಂದ ॥ ೨೯ ॥

ಚೋರರನು ಕಂಟಕನ ಹಿಂಸಾ ।
ಚಾರನನು ಷಂಡನನು ಸಮಯವಿ ।
ಕಾರಿಭೇದಿಯನಿಂತಿವರನುಂ ಕಂಡು ಮನ್ನಿಸದೆ ॥
ದೂರದಲಿ ವರ್ಜಿಸುವುದು ಬಹು ।
ಷ್ಕಾರಿಗಳು ಸರ್ವಕ್ಕಿವರುಗಳ್ ।
ಸಾರಿ ತಿಳುಹಿದೆ ಸರ್ವನೀತಿಯ ತಿಳಿಯೊ ಸಿದ್ಧೇಂದ್ರ ॥ ೩೦ ॥

ತೋಷವುನದಿಂ ಸಿದ್ಧ ನುಡಿದನು ।
ಬೇಸರಿಕೆ ತಾನೋಯ್ತು ನಿಮ್ಮುಪ ।
ದೇಶದಿಂದಕೃತಾರ್ಥನಾದೆನು ಯಿಹಪರವ ಗೆಲಿದು ॥
ಘಾಸಿಯಾದುದು ರಾಗಲೋಭದ ।
ಮೀಸಲಳಿದುದು ನಿಮ್ಮ ದೆಶೆಯಿಂ ।
ಯೇಸುಧನ್ಯನೊ ನಾನುಯೆಂದೆರಗಿದನು ಗುರುಪದಕೆ ॥ ೩೦ ॥

ಘನಗುರುವು ಪೇಳ್ದಂಥ ಬೋಧವ ।
ನೆನೆದು ಮನದೊಳು ಯೋಗರೀತಿಯ ।
ನನುಸರಿಸಿ ಸಾಧನವ ಗೈಯಲು ಸಿದ್ಧನನುವಾದ ॥
ಮುನಿಕುಲಾರ್ಯನು ಮರೆದು ಬಹಿರವ ।
ತನತನಗೆ ಯಿಂದ್ರಿಯವ ದಮನಿಸಿ ।
ಘನಸಮಾಧಿಯನಾಂತಸೇಂ ಪೇಳುವದು ಕೌತುಕವ ॥ ೩೧ ॥

ಮರೆದು ವ್ಯವಹಾರಗಳ ಕರಣದ ।
ಬೆರೆದು ಸಂಪೂರ್ಣಾತ್ಮ ತೇಜದಿ ।
ಪರಮನೇ ತಾನಾದ ಶ್ರೀ ಸಿದ್ಧೇಂದ್ರನೋಡಲ್ಕೆ ॥
ಜರುಗಿ ಪೋದವು ಯಿಂತು ಕೆಲದಿನ ।
ಮರುಕದಿಂ ಪಿತಮಾತೆಯರು ತಾವ್ ।
ಗುರುಸುಮಲ್ಲಪ್ಪಾಖ್ಯಗೆಂದರು ದೈನ್ಯಹೃದಯದಲಿ ॥ ೩೨ ॥

ಕಂದಸಿದ್ಧನು ಆದನೀಪರಿ ।
ಮುಂದಿನಾ ಗತಿಯೇನು ನಮ್ಮಗೆ ।
ಯಿಂದುನೀಂ ದಯ ಭರಿತನಾಗುತ ಬಿಡಿಸು ಈ ಸ್ಥಿತಿಯ ॥
ವಂದನೆಯ ಮಾಡುತಲಿ ಈರ್ವರು ।
ಅಂದು ತೋರಿದರೀ ಸಮಾಧಿಯ ।
ತಂದೆ ತೊಲಗಿಸಿ ಸಲಹು ಯೆಮ್ಮನುಯೆಂದು ಬೇಡಿದರು ॥ ೩೩ ॥

ಕರುಣದಿಂ ಮಲ್ಲಪ್ಪ ತಾತನು ।
ಶರಣವರ ಸಿದ್ಧೇಂದ್ರನಿಗೆ ತಾ ।
ನಿರುವ ಆತ್ಮಧ್ಯಾನ ಸುಖವನು । ಮರೆಸಿದನು ಭರದಿ ॥
ಹರಿದು ಹೋಯಿತು ಚಿತ್ರಕಾಶವು ।
ಬೆರೆದುದಾಕ್ಷಣ ಬಹಿರವಾಸನೆ ।
ಹರಹರಾ ಯೆನಗೇನು ಕಲ್ಮಷವದಗಿತೆಂದೆಂದ ॥ ೩೫ ॥

ಎದ್ದು ಗುರುವಿನ ಮುಖವ ನೋಡುತ ।
ಬಿದ್ದನಂಘ್ರಿಗೆ ಕೋರಿಸಿದ್ಧನು ।
ಇದ್ದುದೆಂತೋಯೆನ್ನ ಪಾಪವು ಅಚಲಸುಖಹೊಯ್ತು ॥
ಬುದ್ಧಿಯದು ಕವಲಾಯ್ತು ಈಗಳ್ ।
ಸದ್ಗುರುವೆ ತವಕೃತಿಯ ತಿಳಿಯಲು ।
ಬದ್ಧಮತಿ ನಾನೇನು ಬಲ್ಲೆನು ಸಲಹು ಕರುಣದಲಿ ॥ ೩೬ ॥

ನಗುತಲಣುಗನ ಶಿರದ ಮೇಲೆಸು ॥
ಸೊಗಸಿನಿಂ ಕರವೆಳೆದು ಗುರುವರ ।
ಮಿಗಿಲು ತೋಷದೊಳುಸುರಿದನು ಝಗಝಗಿಪ ಮುಖದಿಂದ ॥
ಮಗನೆ ಈ ಪರಿ ವರಸಮಾಧಿಯ ।
ತಗುಲಿಕುಳಿತರೆ ನಿನ್ನ ಕಾರ್ಯವು ।
ಜಗನಿ ಬಹಳಿಹುದದರ ಕಾರಣ ಯೆಬ್ಬಿಸಿದೆನೆಂದ ॥ ೩೭ ॥

ಮುದಮನದಿ ಮತ್ತೊಚಿಸಿದನು ತಾ ।
ಚದುರಸಿದ್ಧನು ಗುರುವಿನೊಳು ಸುಖ ।
ಕದಲದಿರುತಿಹ ಬಗೆಯದಾವುದು ಅರುಹುದೆನಗಿಗ ॥
ಇದನರಿದು ಮಲ್ಲಪ್ಪ ತಾತನು ।
ಬೆದರದಿರು ಮಗು ಸತತದಾ ಸುಖ ।
ಕದಲದಲೆ ವದಗುವ ಸುಕೀಲನು ತಿಳುಹುವೆನುಯೆಂದ ॥ ೩೮ ॥

ಸಾವಧಾನದಿ ಕೇಳ್ಮಗನೆ ಈ ।
ಜೀವನಿಚಯದಿ ನಾಸವಾಡಿಹ ।
ದೇವದೇವನ ನಿಲವು ಅವಿರತ ಕಾಲದಲಿ ತಾನು ॥
ಭಾವದಲಿ ನೆಲೆಗೊಂಬ ಗೋಪ್ಯದ ।
ಆ ವಿಧವ ಸಾಂಗದಲಿ ಪೇಳುವೆ ।
ನೋವಬೇಡೈಮನದಿ ಶರಣನೆ ಶಾಂತದಿರುಯೆಂದ ॥ ೩೯ ॥

ಪರಮತರದೀ ಯತಿಪುರಾಣವ ।
ನುರುಮುದದೊಳೋದುವರಿಗಂ ಪೇ ।
ಳ್ವರಿಗೆ ಆಲಿಸುವರಿಗೆ ಸದ್ಗುರು ಕೋರಿಸಿದ್ಧೇಶಂ ॥
ಚಿರತರಾಯುರರೋಗ್ಯವೈಸಿರಿ ।
ಪರಮವಿದ್ಯೆ ಸುಭಕ್ತಿಮೊದಲಾ ।
ಗಿರುವ ಸತ್ಫಲಗಳನು ಕರುಣಿಸುತಿರ್ಪ ನಿದುದಿಟವು ॥ ೪೦ ॥

ಅಂತು ಸಂಧಿ ಐದಕ್ಕಂ ಪದನು ೧೩೫ ಕ್ಕಂ ಮಂಗಲಂ ಮಹಾ

ಶ್ರೀ ಶ್ರೀ ಶ್ರೀ

॥ ಶ್ರೀಗುರು ಕೋರಿ ಸಿದ್ಧೇಶ್ವರಾಯನಮಃ ॥



## ಆರನೆಯ ಸಂಧಿ

ಸೂಚನೆ—ಶರಣವರ ಮಲ್ಲಪ್ಪ ತಾತನು ।
ಅರುಹೆ ಹಲವು ಸಮಾಧಿ ವಿವರವ ।
ಇರುವ ಗ್ರಾಮವ ಬಿಟ್ಟು ಕಾಖಂಡಿಕಿಗೆ ಸಾರಿದನು ॥

ನೋಡೆ ನಿಮಿಷಕೆ ಸಹಸ್ರ ಸುತ್ತನು ।
ನಾಡೆಗೈವಾಪುರತ್ರಯಂಗಳ ।
ಗೂಡಿಗರ್ವದಿ ಮೂವ್ವರಸುರರು ಸುರರ ನಿಕರಕ್ಕೆ ॥
ಮಾಡುತಿರೆ ಬಲು ಕಷ್ಟತರದಾ ।
ಪೀಡೆ ಸಹಿಸದೆ ಶರಣು ಬಾರಲ್ ।
ನೋಡಿ ತನ್ನಕ್ಷಿಯಲಿ ವುರುಹಿದ ಶಂಭುಪಾಲಿಪುದು ॥ ೧ ॥

ಮತ್ತೆ ವಚಿಸಿದ ಗುರುವಿನೊಳು ತಾ ।
ಸತ್ಯಸ್ಥಿತಿಯುತ ಸಿದ್ಧಯೋಗಿಯು ।
ಪ್ರತ್ಯಗಾತ್ಮನ ರೂಪುಪೇಳ್ಕೆ ಯೆನಗೆ ಸಮ್ಮುದದಿ ॥
ಪೃಥ್ವಿಯಲಿ ಯೆಲ್ಲೆಲ್ಲಿ ತುಂಬಿಹ ।
ಕೃತ್ತಿವಾಸನ ನಿಲವು ತೋರುವ ।
ಉತ್ತಮೋತ್ತಮ ಸಾಧನ ಸಕೀಲ ಸಂಗತಿಯ ॥ ೨ ॥

ಸೊಲ್ಲು ಕೇಳುತ ಶಿಷ್ಯನಾಡುವ ।
ಎಲ್ಲ ವಿವರವ ನರಿತು ಗುರುವರ ।
ಬಲ್ಲವನೇ ನೀ ಕೇಳು ಹಲವು ಸಮಾಧಿಗಳನೀಗ ॥
ಮೆಲ್ಲನಿದನೀಂ ಸಾಧನಂ ಗೊಡೆ ।
ಚಲ್ಲುವುದು ಪ್ರಭೆ ಅಖಿಲಸ್ಥಲದಲಿ ।
ನಿಲ್ಲುವುದು ಆನಂದ ಸಾರದ ಶರಧಿಯಲಿ ಮುಳುಗಿ ॥೬

ಶರಣವರ ಕೇಳ್ ಸರ್ವಬ್ರಹ್ಮಾ ।
ಗಿರುವದೆಂಬುದ ಸ್ಥಿರವ ಪಡಿಸಲು ।
ಉರುತರದ ನಿಧಿಧ್ಯಾಸವದು ಸಮ್ಮತವೆ ತಾನಾಗಿ ॥
ಅರಿಯದೇನನು ದ್ವೈತವೆಂಬುನ ।
ಮರೆದುಯೆಲ್ಲಾ ಶಿವನ ಸಾಕ್ಷಾ ।
ತ್ಕರವು ತಾನಿರುತಿರಲುಯದುವೆ ಸಮಾಧಿ ಕೇಳೆಂದ ॥೭

ಆರು ಕೇಳುವರಾರು ಕಾಂಬುವ ।
ರಾರು ವಾಸಿಪರಾರು ಭುಂಜಿಪ ।
ರಾರು ಶಿತೋಷ್ಣಾದಿ ಮೃದುಕಠಿನರಿವವನು ಆರೋ ॥
ಆರು ಆತ್ಮನು ಆತ್ಮ ತಾನೇ ।
ಕುರುಹುರಹಿತನು ತಾನೆಯೆಂದೇ ।
ಬೆರೆದಿರಲು ಈ ಪರಿಯು ಚಿತ್ತಸಮಾಧಿ ಕೇಳೆಂದ ॥೮

ತನುವಿನೊಳು ಅಂತರ್ಯ ದೃಶ್ಯವ ।
ಅನುಕರಿಸಿ ದೃಷ್ಟಿಯನು ನೆಲಸುತೆ ।
ಮಿನುಪ ತೇಜದ ರಾಶಿಯೊಳು ಮನಮುಗ್ನ ತಾನಾಗಿ ॥
ಯನಿತನಿತು ವಾಸನೆಯನುಡುಗಿಸಿ ।
ಚಿನುಮಾಯಾತ್ಮಕ ತಾನೆಯಾಗಿಯೆ ।
ಕನಲದೆಂದಿಗೆ ಧೃತಿಯಿರಲು ಯಿದು ಸಮಾಧಿಯಿಂತೆಂದ ॥೯

ನಾನೆ ಬ್ರಹ್ಮವು ನಾನೆ ವಸ್ತುವು ।
ನಾನೆ ಸಕಲಾಧಾರ ಸಾಕ್ಷಿಯು ।
ನಾನೆ ಸರ್ವವ್ಯಾಪ್ತ ಸಚ್ಚಿನ್ಮಾತ್ರ ತಾನೆಂದು ॥
ಈ ನಿಖಿಲ ನುಡಿಯೆಂದುಕೊಳ್ಳುತ ।
ತಾನೆಯೆಂದೇ ಭಾವಿಸುತಲದ ।
ಧ್ಯಾನಪರನಾಗಿರಲು ಅದುವೆ ಸಮಾಧಿಯಿಂತೆಂದ ॥ ೭ ॥

ವಿಧಿಯು ಮೊದಲು ಪಿಪೀಲಿಕಾಂತ್ಯದಿ
ಪುದಿದು ತೋರುವ ಜೀವನಿಕರನಿ ।
ವರನಿಮಣಿಗಣ ಸೂತ್ರತೆರದೊಳು ತಾನೆಯಾಗಿರುತ ॥
ಸದಯ ಸೋಹಂ ಬಹ್ಮವೆ ನಾ ।
ನಿದಕೆ ಪೆರತಿನಿತಿಲ್ಲವೆಂದೆನೆ ।
ಇದು ಸಮಾಧಿಯ ರೀತಿ ಕೇಳೈ ಶರಣ ಸಿದ್ಧೇಶ ॥ ೮ ॥

ಶ್ರುತಿಯು ಪೇಳ್ವ ಸಮಾಧಿದ್ವಯುವದು ।
ಅತುಲ ಸವಿಕಲ್ಪಕವು ಮೇಣ್ ವರ ।
ಮತಿಗಗೋಚರ ನಿರ್ವಿಕಲ್ಪಕವೆಂದು ನಿಜವಾಗಿ ॥
ಪ್ರಥಮದೀ ಸವಿಕಲ್ಪ ಸಗುಣವು ।
ಸುತನೆ ನಿರ್ವಿಕಲ್ಪ ನಿರ್ಗುಣ ।
ಸ್ಥಿತಿಯು ಇಂತಿರುತಿಹವು ಮಹಶ್ರುತಿಲಪಿತದಲಿಯೆಂದ ॥ ೯ ॥

ಅರುವು ಇರಲದು ಸಗುಣಕಲ್ಪವು ।
ಅರುವಿರದೆಯಿರೆ ನಿರ್ವಿಕಲ್ಪವು ।
ಯೆರಡರಾ ವೃತ್ತಾಂತಯೀಗಳ್ ಸಗುಣ ಕಲ್ಪಕವ ॥
ಒರೆವೆ ಆಲಿಸುಯಿದನು ಮೊದಲಲಿ ।
ಅರುಹುವೆನು ನಂತರದಿ ನಿರ್ಗುಣ ।
ಪರಿವಿಡಿದು ತಿಳಿಯಯ್ಯ ದ್ವಯದಾ ಬಗೆಯನೀನೆಂದ ॥ ೧೦ ॥

ಮುಚ್ಚಿದ್ದೃಗವನು ದೇಹದೊಳಗೆ ಸು ।
ನಿಚ್ಚ ಪೂಗಳರಾಶಿ ಸ್ಫುರಿಸುತ ।
ಸ್ವಚ್ಛವಾಗಿಯೆ ಸರ್ವಕೂಡಿಯೆ ಯೆಕಪ್ರಭೆಯಾಗಿ ॥
ಅಚ್ಚರಿಯ ತೋರುತಲಿ ಸುಖವದು ।
ಮುಚ್ಚಿ ಬೋಧಾರೂಪವೆರಸುತ ।
ಯೆಚ್ಚರವು ತಾನಿರಲು ಸಗುಣ ಸಮಾಧಿಯಿದುಯೆಂದ ॥ ೧೧ ॥

ಗುರುತು ಪೆರ್ಚಿಸಿ ದೃಷ್ಟಿಮಧ್ಯದಿ ।
ಗುರಿಯನೇ ತಾನೆಲಸುತಿರಲ್ಕಾ ।
ಗುರಿಯಲೇ ಪೂರ್ಣ್ಮವವು ಬಹುತರರೋಚಿಗಳು ತಾವು ॥
ತೆರಪುಯಿಲ್ಲದ ತೇಜಚಯವದು ।
ಭರದಿ ಕಾಣುತ ಅಂತ್ಯಭಾಗದಿ ।
ಬರಿಯ ಬೆಳಗದು ನಿಲ್ಲೆ ಸಗುಣ ಸಮಾಧಿಯಿದುಯೆಂದ ॥ ೧೨ ॥

ಗುಡುಗು ಗುಡುಗಿದ ತೆರದಿನಾದದ ।
ಗಡಬಡವು ಅತಿಯಾಗಿ ಬೀಳುವ ।
ಶಿಡಿಲುಮಿಂಚಿನ ಪರಿಯು ಷಣ್ಮುದ್ರೆಗಳು ಹೃದಯದಲಿ ॥
ದೃಢದಿ ಆನಂದವನು ಪಸರಿಸಿ ।
ಧಡಧಡಿಸಿ ಬಹುಪ್ರಭೆಯು ತೋರುತ ।
ಸಡಗರದ ಸುಖವದುವೆ ಸಗುಣ ಸಮಾಧಿಯಿದುಯೆಂದ ॥ ೧೩ ॥

ನಾಸನಿಡಿದದು ಗೈದನಾದಡೆ ।
ವಾಸನಾಹವು ನೆನೆದ ಫಲಗಳು ।
ವಾಸನಿಲ್ಲದೆಯೆಸಗೆ ನಿರ್ಗುಣಪದವು ದೊರಕುವವು ॥
ಕೂಸೆ ಕೇಳ್ಕೆ ರಾಜಯೋಗದಿ ।
ಭಾಸುರದ ಯೋಗದೊಳು ಸಗುಣದು ।
ಈ ಸಗುಣ ಬೆರೆಯುಲ್ಕೆ ನಿರ್ಗುಣಯೋಗವದು ಎಂದ ॥ ೧೪ ॥

ಹೊರಗೊಳಗೆ ಆನಂದದನುಭವ ।
ಭರಿತವಾಗಲು ಯೋಗಮತ್ತೀ ।
ನರಿಯದಲೆ ನೀವಾತದೀಪದ ತೆರದಿ ತಾನೆಸವ ॥
ತರುಳಯಿದು ದೃಷ್ಟಾಂತಯೋಗ ।
ಪರತರಾತ್ಮನ ಸ್ಮರಣಬಲದಿಂ ।
ಹರಿವರಾ ಭವಬಂಧವನು ಯೆಂದೆನಲು ಸಮ್ಮುದದಿ ॥ ೧೫ ॥

ಶ್ರೇಷ್ಠಜನರಿಂತೆಂದು ಶ್ಲಾಘಿಸೆ ।
ಭ್ರಷ್ಟಜನರಿದು ಸಹಿಸಲಾರದೆ ।
ದುಷ್ಟಲಪಿತವ ವಚಿಸುತಿರುವರು ಚಿತ್ತವಿಹ್ವಲರು ॥
ನಷ್ಟವಿದು ಸಂಸ್ಸೃತಿಯ ಜನ ಕು ।
ತ್ಸಿಷ್ಟತನವದು ಅಲ್ಲವೆನುತಲಿ ।
ಕ್ಲಿಷ್ಟವುಕ್ತಿಯನುಸುರುವರು ಮನಬಂದ ತೆರನಂತೆ ॥ ೧೬ ॥

ಪಾಪಿಗಳಿಗೇತಕ್ಕೆ ಶಾಂತಿಯು ।
ಕೋಪಿ ಮನುಜರಿಗೇಕೆ ದಯವದು ।
ಶಾಪಿಸುವ ನೀಚಂಗದೇತಕೆ ಕ್ಷೇಮಲಾಭಗಳು ॥
ದೀಪದಾ ಗೊಡವೇಕೆ ಚೋರಗೆ ।
ಪಾಪ ಸಂಸರ ಕೂಪನಿರಯಗೆ ।
ಆ ಪರಾತ್ಪರ ಬ್ರಹ್ಮ ಅರಿದರ ಸ್ಥಿತಿಯ ತಿಳಿವೇಕೆ ॥ ೧೭ ॥

ತರುಳ ತಿಮ್ಮಾನಗರದಿರುವಾ ।
ನರರ ದೂಷಣೆ ಸಹಿಸಲಾಗದು ।
ಭರದಿ ಪೇಳುವೆನೆಂದು ಗುರುವರ ಶಿಷ್ಯಗಿಂತೆಂದ ॥
ಇರಲು ಬಾರದು ಈ ಪುರದೆ ಜಪ ।
ತೊರೆದು ಪೋಗ್ವದು ಬಹಳ ನಯವೆನೆ ।
ಶರಣವರ ಸಿದ್ಧೇಂದ್ರನೊಪ್ಪಿದ ಗುರುಗಳಾ ನುಡಿಗೆ ॥ ೧೮ ॥

ಸನುಮತಿಸುತಾ ಕೋರಿ ಸಿದ್ಧನು ।
ಜನನಿ ಜನಕರ ಬಳಿಗೆ ತೆರಳುತ ।
ತನಗೆ ಗುರುವರ ಪೇಳ್ದವಿಷಯುವ ಪೇಳ್ದ ಶಿರಬಾಗಿ ॥
ತನಯುನೊಳು ದಯರಸವ ಪೆರ್ಚಿಸಿ ।
ಅನುಕರಿಸಿರ್ಕೈ ಆಜ್ಞೆಯೀಗಲೆ ।
ಯೆನಗೆ ಪಯಣದಿ ಯಿಚ್ಛೆಯಿಹುದೀ ಗ್ರಾಮುವಂ ತ್ಯಜಿಸಿ ॥ ೧೯ ॥

ಕಂದನಾಡಿದ ನುಡಿಯ ಕೇಳುತ ।
ತಂದೆ ನಿನ್ನನು ವುಳಿದು ನಾವ್ಗಳು ।
ಯಿಂದು ಈ ಗೇಹದಲಿ ಇರುವದು ಆಗದೆಂದಿಗೆಯು ॥
ಮುಂದೆ ನಮುಗೇನ್ಗತಿಯು ಪೇಳ್ಕೈ ।
ಯೆಂದು ಆಡಿದ ಮಾತೆಪಿತರಿಗೆ ।
ಅಂದು ವುಸುರಿದ ಶೀಲಸದ್ಗುಣ ಕೋರಿ ಸಿದ್ಧೇಂದ್ರ ॥ ೨೦ ॥

ಯಾತನೆಯ ಈಗಾತ್ರ ಪುತ್ರನ ।
ಪ್ರೀತಿಯದು ನಿಮುಗೇಕೆ ಬಿಡಿರ್ಕೈ ।
ನೀತಿ ವಿಷಯುಗಳಿಂದ ತಿರುಹುವೆನಿದರ ಸಂಗತಿಯ ॥
ಭೂತಪಂಚಕದಂಶವಿಡಿದಾ ।
ಧಾತು ಸಪ್ತಕ ರಚನದಿಂ ತಾ ।
ನೀತೆರಧ ಮಲಿನಾಂಗಕೆಯು ನೀವ್ ಮೋಹಮಾಡುವರೆ ॥ ೨೧ ॥

ಹೇಸಿಕೆಯ ತನುವಿದರೊಳಗೆ ಅತಿ ।
ವಾಸನೆಯ ದುರ್ಗಂಧ ತುಂಬಿಹ ।
ದೇಸು ಹೇಳಲಿ ವಿವಿಧ ಕರಣದೊಳಿಳಿವ ಮಲಗಳನು ॥
ಬೇಸರಿಕೆ ಬರುತಿಹುದು ವುಸುರಲು ।
ನಾಶವಾಗ್ವದು ನಿಮಿಷದೊಳಗಿದ ।
ರಾಶಿಯನು ತ್ಯಜಿಸುತಲಿ ಇರ್ಪರು ಯುಮಿಗಳೂ ಎಂದ ॥ ೨೨ ॥

ಕಷ್ಟತರವಹ ತನುವಿನಪಕೃತಿ ।
ಎಷ್ಟು ಹೇಳಿದರದುವೆ ತೀರದು ।
ಕ್ಲಿಷ್ಟನಾಗಿಹುದಿದರ ಮೋಹವನುಳಿದು ವಮ್ಮನದಿ ॥
ದೃಷ್ಟಿಮೂರನು ಧ್ಯಾನದಲಿ ಮನ ।
ವಿಟ್ಟು ಸತತಂ ನಿಷ್ಠೆಯಿಂದಂ ।
ಬಿಟ್ಟು ಬಿಡದೊಲು ಭಜಿಸಿದೊಡೆ ಘನತರದ ಸುಖವಹುದು ॥ ೨೩ ॥

ವಿನುತ ಸಿದ್ಧನು ಈ ಪರಿಯೊಳುಂ ।
ಜನನಿ ಜನಕರಿಗರುಹಲಾಗಳ್ ।
ಮನದೊಳಗೆ ಬಲುತೋಷವಾನುತ ನುಡಿದರಾಕ್ಷಣದಿ ॥
ಅನಘರೂಪನೆ ಯೆಮ್ಮವುದರದಿ ।
ಜನನ ತಾಳುತಲೆಮ್ಮ ವಂಶವ ।
ಘನವ ಗೊಳಿಸಿದಿಯೆಂದು ಆಶೀರ್ವಚನ ಸಲಿಸಿದರು ॥ ೨೪ ॥

ತಂದೆ ತಾಯ್ಗಳನುಜ್ಞೆ ಪಡೆಯುತ ।
ಬಂದ ಗುರು ಮಲ್ಲಾಖ್ಯನೃತ್ರಿರ ।
ನಿಂದು ಶಿರಬಾಗುತಲಿ ನಮ್ರದಿ ಶರಣ ಬೆಸಗೊಂಡ ॥
ಮುಂದಿನಾ ಕಜ್ಜಮದು ಯೇನೈ ।
ಯೆಂದು ಕೇಳಲ್ಕಾಗ ಗುರುವದ ।
ಕೆಂದ ಸಿದ್ಧನೆ ನಡೆವದೈ ಈ ಪೊಳಲನುಳಿದಿಂದು ॥ ೨೫ ॥

ಧರಣಿವರ ಶ್ರೀ ಶಾಲಿವಾಹನ ।
ವರಶಕವು ಸಪ್ತಾದಶದ ಮೇ ।
ಲಿರುವ ನಲವತ್ತೆಂಟನೆಯ ಕ್ಷಯನಾಮ ವತ್ಸರದಿ ॥
ಬೆರೆದು ಯಿಹ ದ್ವಾದಶಿಯ ಗುರುವಾ ।
ಸರದಿ ಘನತರ ಶುಭಮುಹೂರ್ತವು ।
ಇರುವ ಸಮಯದಿ ತ್ಯಜಿಸಿದರ್ಪುರವವರು ಮುದಗೊಂಡಿ ॥ ೨೬ ॥

ಹಿಡಿದು ವುತ್ತರದಿಶದ ಪಥವನು ।
ನಡೆದು ಬರುತಿರೆ ಮಾರ್ಗದಲ್ಲಿಹ ।
ಗಿಡಲತೆಯು ಕೊಳಕೂಪ ಸಂಚಯು ಈಕ್ಷಿಸುತ ಭರದಿ ॥
ಯೆಡೆಯೊಳೈದುವ ಕ್ರೂರ ಮೃಗಗಳ ।
ಗಡಣವನು ನೋಡುತಲಿ ಧೈರ್ಯವ ।
ಬಿಡದೆ ನಡೆದರು ಮುಂದೆ ಪಯಣವ ಬೆಳೆಸಿ ಜವದಿಂದ ॥೩೭

ಹರನ ರೂಪದಿ ತೋರುತಿರುತಿಹ ।
ಗುರುವು ಶಿಷ್ಯರ ಬರವು ಕಾಣುತ ।
ಪುರಜನಂಗಳು ಬಂದು ಮಾರ್ಗದಿ ಚರಣಕೆರಗುತಲೀ ॥
ಪರಮ ಪುರುಷರೆ ಎಲ್ಲಿಗೇ ನೀವ್ ।
ತೆರಳಿಪೋಪಿರಿ ಎಂದು ಹರುಷದಿ ।
ಪರಿಪರಿಯ ಉಪಚಾರದಿಂ ಮನತೃಪ್ತಿಗೊಳಿಸುವರು ॥೩೮

ಅಸಮ ಭಕ್ತಿಯೊಳ್ಕಲಜನಂಗಳು ।
ಬಿಸಿಜಲದಿ ಮಜ್ಜನವ ಮಾಡಿಸಿ ।
ಪೊಸಪರಿಯ ಮಧುರಾನ್ನದಿಂ ಭೋಜನವ ಗೈಸುತಲಿ ॥
ಅಸಮರೇ ಎಮ್ಮಗೆಯು ನೀವ್ಗಳು ।
ವೊಸೆದು ದರ್ಶನವಿತ್ತುದಕೆ ನಾವ್ ।
ವಸುಧೆಯೊಳು ಬಲು ಧನ್ಯರಾದೆವು ಎಂದು ನಮಿಸುವರು ॥೩೯

ಹೀಗೆ ಪಥದೊಳಗಿರುವ ಪುರಗಳ ।
ಸಾಗಿಪಯಣವ ಮಾಡುತಿರೆ ಶಾ ।
ನಾಗಿ ಬರುತಿಹ ಭಕ್ತಜನರಾ ಬಯಕೆ ತೀರಿಸುತ ॥
ಮೂಗರಿಗೆ ವಾಗ್ದಾನ ಮಾಡುತ ।
ರೋಗಿಗಳಿಗಾರೋಗ್ಯವೆಸಗು ।
ತ್ತಾಗ ನಡೆಯುತ್ತಿರ್ದ ಸಿದ್ಧನು ಗುರುವಿನೊಳ್ಕೂಡಿ ॥೪೦

ಯೆಲ್ಲಿಯೆಲ್ಲಿಯು ಪೋಗೆ ಗುರುಗಳು ।
ಅಲ್ಲಿಅಲ್ಲಿಯೆ ಪೂಜೆಗೊಂಬುತ ।
ಬಲ್ಲಬಲ್ಲಿದ ವಿಬುಧರಿಂ ಬಲು ಶ್ಲಾಘಿಸಿಕೊಳ್ಳುತ್ತ॥
ಸೊಲ್ಲುಸೊಲ್ಲಿಗೆ ಶಿವನ ಸ್ಮರಿಸುತ ।
ಮೆಲ್ಲಮೆಲ್ಲನೆ ಮುಂದಕೆಯು ನಡೆ ।
ದಲ್ಲಿಗಲ್ಲಿಗೆ ಮಹಿಮೆ ಬೀರುತ ಬರುತಿರಲು ಮುಂದೆ ॥ ೩೧ ॥

ಆಗಳಾಮುಂಭಾಗದಲಿ ತಾ ।
ಬೀಗಿದಾ ನಿಲವಾಂತು ಸೊಬಗಿನ ।
ಸಾಗರವೆ ತಾನೆಂಬ ತೆರದಲಿ ಬಹಳ ಪೆಂಪಿನಲಿ ॥
ನಾಗಶಯನನ ಸತಿಯ ವಾಸಕೆ ।
ಯೋಗೆನಿಪ ಶುಭಸದನವೆನೆ ಸಾ ।
ನೀಗ ವುಸುರಲು ಸಾಧ್ಯವೇ ಆ ಪುರದ ವೈಭವವ ॥ ೩೨ ॥

ತೆಂಗುಳದಳಿಯ ಬನಗಳಿಂದಲಿ ।
ಪುಂಗಪನ ಸುದ್ರಾಕ್ಷಮಂಟಪ ।
ತುಂಗನಿಂಬೇ ಜಂಬುನೀರಲ ಕುಜತತಿಯು ತಾವು ॥
ಪೊಂಗಿ ಫಲಭಾರದಲಿ ಬಾಗುತ ।
ಸಾಂಗದಲಿ ಪಥಿಕರಿಗೆ ಹಸಿವೆಯ ।
ಹಿಂಗಿಸುವುದೆನೆ ತೋರುತಿರ್ದವು ಪುರದ ಬಹಿರದಲಿ ॥ ೩೩ ॥

ಕಾಂತಿವಡೆದಿಹ ಗೇಹಚಯದಿಂ ।
ಕಂತುಸಮ ಸ್ತ್ರೀ ಪುರುಷರಿಂದಂ ।
ನಿಂತೆಸೆವ ಕಾಖಂಡಿಕೀ ಪುರನೋಡ್ದರುರುಮುದದಿ ॥
ಶಾಂತಿಮನದಾ ಮಲ್ಲಪಾಖ್ಯನು ।
ಚಿಂತೆ ಹರ ಶ್ರೀ ಕೋರಿಸಿದ್ಧನು ।
ಸಂತಸದಿ ತಾವ್ ಬಂದುಳುಳಿತರು ಪೊಳಲ ಹೊರಬದಿಗೆ ॥ ೩೪ ॥

ಬಂದು ಕೂಡ್ರಲ್ಕಾಗ ಜನವಾ ।
ನಂದದಿಂ ಬರುತಾಗ ಯತಿಗಳ ।
ಅಂದವೀಕ್ಷಿಸಿ ಪೂರ್ಣಭಕ್ತೀ ಭಾವವನು ತೋರಿ ॥
ವಂದಿಸುತೆ ಈರ್ವರಿಗೆ ತನುಮನ ।
ದಿಂದ ಪೂಜೆಯಗೈದು ನುಡಿದರು ॥
ತಂದೆಗಳೆ ತಾವ್ ಬಂದುದಕೆ ಬಲು ಹರುಷನವುಗಾಯ್ತು ॥ ೩೫ ॥

ಈ ಪರಿಯೊಳಾ ಭಕ್ತನಿಕರವು ।
ತಾಪಸರಕೊಂಡಾಡಿ ಬಹುಪರಿ ।
ಪಾಪವದು ತಾನೋಯ್ತು ನಿಮ್ಮಯ ದರುಶನದಲೆನುತ ॥
ವೋಪಿ ನುತಿಸುವ ಜನಕೆ ಪುಣ್ಯ ಪ್ರ ।
ದೀಪ ಶರಣರು ಮೆಚ್ಚಿನುಡಿದರು ।
ಲೋಪವಾಗಲಿ ನಿಮ್ಮ ಕಲ್ಮಷನೆಂದು ಹರಸಿದರು ॥ ೩೬ ॥

ಇರುತಿರಲಿಕೀ ಸ್ಥಲದಿ ಕೆಲದಿನ ।
ಜರುಗಿ ಪೋಗಲು ಇದೇ ಸುಗ್ರಾಮದ ।
ತರುಣಿಮಣಿ ಮಾಳಮ್ಮ ನಾಮದ ಮಾಲಿಗೌಡತಿಯು ॥
ಬರುತ ಬಹುಭಯಭಕ್ತಿಯಿಂದಲಿ ।
ಯೆರಗಿದಳು ತಾ ಉಭಯ ಶರಣರ ।
ಚರಣ ಪದ್ಮಂಗಳಿಗೆ ಬಹುಪರಿ ಪ್ರಾರ್ಥನೆಯಗೈದು ॥ ೩೭ ॥

ಬೇಡಿಕೊಳುತಲಿ ಗುರುವಿನೊಳು ಮಾ ।
ತಾಡಿದಳು ಮಿಗೆ ನಮ್ರಸ್ವರದಿಂ ।
ಕೂಡಿದೈನ್ಯವ ತೋರುತಲಿ ಪೆಣ್ಮಣಿಯು ತಾನಾಗ ॥
ಕೂಡಿ ಈರ್ವರು ಇಲ್ಲೆ ಇರ್ಪುದು ।
ಮಾಡಬೇಡಿರಿ ದ್ವಯಮನವ ನಿಮು ।
ಗಾಡಲೇಂ ಈ ಬಡವಿಲಪಿತವ ಮನ್ನಿಪುದು ಯೆಂದಳ್ ॥ ೩೮ ॥

ಮಾತುಕೇಳಿದ ಬಲ್ಲತಾತನು ।
ಪ್ರೀತೆ ಪೇರ್ಚಿಸಿ ನುಡಿದನಾಕೆಗೆ ।
ನೀತಿಯುತೆ ಮಾಳಾಂಬೆ ತಪಭಾವಕ್ಕೆ ಮೆಚ್ಚಿದೆನು ॥
ಸಾತಿಶಯದಾ ನಮ್ಮ ಬಯಕೆಯು ।
ಈ ತೆರದಿಯಿಹುದದನು ಕೇಳ್ದೊಡೆ ।
ವೋಷು ನಾವ್ಗಳು ಇಲ್ಲೆ ಇರುವೆವು ಕೇಳು ನೀನೆಂದ ॥ ೩೯ ॥

ಗುರುವರನು ಈ ತೆರದಿ ನುಡಿದಾ ।
ಪರಿ ಅರಿದು ಮಾಳಮ್ಮ ಗೌಡತಿ ।
ಯೆರಗಿ ಚರಣಕೆ ಮತ್ತೆ ನುಡಿದಳು ಗಾಢತೋಷದಲೀ ॥
ಮರುಕವಿಲ್ಲದೆ ಕೊಡುವೆನೀ ಸ್ಥಲ ।
ಇರುವುದಿದು ಪನ್ನೆರಡು ಎಕರೆಯು ।
ಇರದೆ ನಿಮ್ಮಯ ಪದಕೆ ಸಲ್ಲಿತುಯೆಂದಳಾ ಅಬಲೆ ॥ ೪೦ ॥

ಇದನುಮಲ್ಲದೆ ಮತ್ತೆ ನಿಮ್ಮಗೆ ।
ವದಗಿಸಿಯೆ ಕೊಡುತಿಹೆನು ನಿತ್ಯದಿ ।
ವಿಧವಿಧದ ಪೂಜೋಪಚಾರದ ಸಕಲ ಸಂಗ್ರಹವ ॥
ಪದುಳದಿಂದಿರು ನೀನು ತಂದೆಯೆ ।
ಕದಲದಿರು ಇಲ್ಲಿಂದ ಯಲ್ಲಿಗೆ ।
ಮದವಿದೂರನ ಸಮನೆ ರಕ್ಷಿಸುತೆಲ್ಲರನು ನೀನು ॥ ೪೧ ॥

ಮತ್ತೆ ನುಡಿದಳು ಇದುವೆ ಸ್ಥಲದಲಿ ।
ವುತ್ತಮೋತ್ತಮ ಮಠವ ಕಟ್ಟಿಸಿ ।
ನಿತ್ಯ ಉಪಚಾರಕರನಿಡುವೆನು ನಿಮ್ಮ ಸೇವಕ್ಕೆ ॥
ಸತ್ಯಜ್ಞಾನದ ಬೋಧವನು ಸಲೆ ।
ಬಿತ್ತರಿಸಿ ಭವಬಂಧ ಜಾಲವ ।
ನುತ್ತರಿಪುದೈ ದಯದಿ ಗುರುವರಯೆಂದಳಾ ಅಬಲೆ ॥ ೪೨ ॥

ಒಪ್ಪಿಕೊಳುತಲಿ ಮಗಳ ಮಾತಿಗೆ ।
ಮುಪ್ಪುತಾರದಿರೆಂದು ಪೇಳಲು ।
ಕಪ್ಪುಕಚೆ ಮಾಳಾಂಬೆ ಗೌಡತಿ ಪೇಳ್ದಪರಿಯಂತೆ ॥
ತಪ್ಪದಲೆ ಮಠರಚಿಸುತಾಗಳ್ ।
ವೊಪ್ಪವಾಗಿಹ ಭೂಮಿ ಸಹಿತಂ ।
ಬೊಪ್ಪನಿಮಗಿದು ಅರ್ಪಿತೆನುತಂ ವಪ್ಪಿಸಿದಳಿರದೆ ॥ ೪೩

ತೋಷದಲಿ ಮಲ್ಲಪ್ಪ ಶರಣರು ।
ಯೇಸೊದಿನ ನೂಕಲ್ಕೆಯಶವದು ।
ದೇಶದೇಶಕೆ ಪಸರಿಸುತಲಿರೆ ಯೇನು ಪೇಳುವೆನು ॥
ಲೇಸು ಬಯಸುವ ಜನವಿತತಿಯದು ।
ಆಶ್ರಯಿಸಿ ಗುರುಪದಕೆ ವಂದಿಸಿ ।
ದಾಸರಾದರು ಸಪ್ತಶತಕಾ ಅಧಿಕ ಸಂಖೆಯಲೀ ॥ ೪೪

ಪರಮತರದೀ ಯತಿಪುರಾಣವ ।
ನುರುಮುದದೊಳೋದುವರಿಗಂ ಪೇ ।
ಳ್ವರಿಗೆ ಆಲಿಸುವರಿಗೆ ಸದ್ಗುರು ಕೋರಿಸಿದ್ಧೇಶಂ ॥
ಚಿರತರಾಯುರರೋಗ್ಯವೈಸಿರಿ ।
ಪರಮವಿದ್ಯೆ ಸುಭಕ್ತಿಮೊದಲಾ ।
ಗಿರುವ ಸತ್ಫಲಗಳನು ಕರುಣಿಸುತಿರ್ಪ ನಿದುದಿಟವು ॥ ೪೫

ಅಂತು ಸಂಧಿ ಆರಕ್ಕಂ ಪದನು ೨೧೦ ಕ್ಕಂ ಮಂಗಲಂ ಮಹಾ

ಶ್ರೀ ಶ್ರೀ ಶ್ರೀ

॥ ಶ್ರೀಗುರು ಕೋರಿ ಸಿದ್ಧೇಶ್ವರಾಯನಮಃ ॥



## ಏಳನೆಯ ಸಂಧಿ

ಸೂಚನೆ—ಗುರುವಿನಾಜ್ಞೆಯ ಪಡೆದು ಗುಳ್ಯಾಳ್ ।
ಪುರಕೆ ಬಂದಲ್ಲಿರದೆ ಮುಂದಕೆ ।
ತೆರಳಿನದಿಯನು ದಾಂಟಿ ನಾಲ್ವಾರಿಂಗೆ ಬಂದಿರೆದೆ ॥

ಶ್ರೀಯುಮಾವರನಿಂದುಧರ ಸುತ ।
ಕಾಯಕಾಯಜ ದಹನ ವಿಷಗಳ ।
ವಾಯುಭಕ್ಷಣ ಭೂಷಮುಹಿಮಾಕೋಶ ಭವನಾಶ ॥
ಸ್ವಾಯತಾಖಿಳ ಲೋಕನರವರ ।
ದಾಯಕಂ ತ್ರಿಪುರಾರಿ ತ್ರ್ಯಮಲ ।
ಮಾಯುಮರ್ದನ ಮೌನಿಜನಮನವಾಸ ಶಿವಪೊರೆಗೆ . ॥ ೧ ॥

ದಿನದಿನಕೆ ಮಲ್ಲಾಖ್ಯ ಶರಣನ ।
ಘನತೆ ಪೆಚ್ಚಾಗುತ್ತ ನಡೆದಿರೆ ।
ಜನರು ಬರುವರು ದೂರದೇಶದೆ ಪರಮಭಕ್ತಿಯಲಿ ॥
ವಿನತರಾಗುತ ನಮ್ರಭಾವದಿ ।
ಅನುಸರಿಸಿ ತಾವ್ ಬೇಡಿಕೊಳ್ವರು ।
ಮನುಮಥಾದಿಯ ರೂಪ ಶ್ರೀಗುರು ಬೋಧಿಸೆಂದೆನುತ ॥ ೨ ॥

ಕರ್ತೃವಿನ ಬಳಿಗೈದ ವರವೋ ।
ಕ್ಷಾರ್ಥಿಗಳ ಸಂಚಯಕೆ ಅವರಿ ।
ಷ್ವಾರ್ಥಗಳ ಸಲಿಸುವನು ಗುರುವರ ನೋದಮನದಿಂದ ॥
ಸಾರ್ಥಕವ ಪಡಿಸುತಲಿ ಶಿಷ್ಯರ ।
ಪ್ರಾರ್ಥನೆಯನೊಳಕೊಂಡು ಸುಗುರು ಸ ।
ಮರ್ಥ ಮೆರೆದನು ಪರಮಕಾಖಂಡಿಕಿಯ ಪುರದಲ್ಲಿ ॥

ಇರುತಿರಲು ಕೆಲದಿನವು ಗತಿಸಲು ।
ಪರಮಮತಿಯುತ ಕೋರಿಸಿದ್ಧನು ।
ಗುರುವು ಮಲ್ಲಪ್ಪನಿಗೆ ಅರುಹಿದ ಮನದವಾಂಛಿತವ ॥
ಕರುಣಿಸೈ ಎನಗೀಗ ಪಯಣಕೆ ।
ತೆರವುಗೊಡು ದಯಭರಿತನಾಗುತೆ ।
ತರುಳನೋಳ್ ದಯವಿರಲಿಯೆಂದುಂ ಚರಣಕೆರಗಿದನು ॥

ಈ ತೆರದಿ ಬೆಸಗೊಳ್ವ ಸಿದ್ಧನ ।
ಮಾತುಗಳನಾಲಿಸುತ ತೋಷದಿ ।
ಪೋತು ವಚಿಸಿದ ಶರಣ ನಿನ್ನಯ ಸುಕೃತಮೇಲಿಹುದು ॥
ಭೂತಲದೊಳತಿ ಮಹಿಮೆ ಬೀರುತ ।
ಖ್ಯಾತಿಯುತನೆಂದೆನಿಸಿ ಜಗದೊಳು ।
ನೀತಿಪರನೀನಾಗು ಪೋಗೈ ಪರಮನಂ ನುತಿಸಿ ॥

ಇಂತು ಗುರುವರನಾಜ್ಞೆಯನು ತಾ ।
ನಾಂತು ನಡೆದನು ಮುಂದೆ ಬಹು ಸೊಬ ।
ಗಾಂತ ವಿಪಿನವನೋಡುತ್ತೈತರುತಿರಲು ಶರಣೇಂದ್ರ ॥
ಪ್ರಾಂತದಲಿ ಭಕ್ತಾದಿಗಳು ತಾವ್ ।
ಕಂತುಮದಭಂಜನನ ಸಮನಹ ।
ಶಾಂತ ಶ್ರೀಗುರು ಕೋರಿ ಸಿದ್ಧಗೆ ನಮಿಸಿಸ್ತುತಿಸುವರು ॥

ಹರನ ಅವಯದ ಬೆಳಗು ಯೆನಿಸುವ ।
ಮಿರುಗುತಿಹ ಭಸ್ಮದ ಸುಫಾಲದಿ ।
ಕೊರಳು ಕರದಲಿ ಶೋಭಿಸುವ ಶಿವನಕ್ಷಿ ಮಾಲೆಗಳು ॥
ಚರಣದಲಿ ಪೊನ್ನಾವಿಗೆಯ ಮೆ ।
ಟ್ಟಿರುತ ನಡೆದನು ದಂಡಲಾಕುಳ ।
ಧರಿಸಿ ಪುರಹರನಂತೆ ಗುರುವರ ಸಿದ್ಧ ತೋರಿದನು ॥ ೭ ॥

ಸ್ಥಾಣುಭಾಯದ ಸಿದ್ಧಯೋಗಿಯ ।
ಕಾಣುತಲಿ ಪುರಜನರು ಬಂದುಂ ।
ಗೋಣುಚಾಚುತ ಮಣಿದುದ್ವಯ ಪದಕೆರಗಿ ಬೇಡುವರ ॥
ಆ ನವೀನದ ಬಯಕೆಗಳ ಘನ ।
ಶ್ರೇಣಿಯಂ ಸಲೆಯಿತ್ತು ಜವದಿ ಪ್ರ ।
ಯಾಣ ಬೆಳೆಸುತಲಿರ್ದನೈ ಹರನಾಮ ಸ್ಮರಿಸುತಲೀ ॥ ೮ ॥

ಬರುತ ಕಂಡುಂ ದೂರದಲಿ ತಾ ।
ತಿರೆಯೊಳುತ್ತಮ ನಿಲಯಮೆನಿಸಿಹ ।
ವರಮಹಾ ಗುಳ್ಯಾಳ ಗ್ರಾಮಕೆ ಬಂದ ಗುರುರಾಯ ॥
ಬರವನೀಕ್ಷಿಸಿ ಪುರಜನಂಗಳು ।
ನೆರೆದು ಶರಣಗೆ ನಮಿಸಿ ನಲವಿಂ ।
ಕರೆದುಕೊಂಡೊಯ್ದುಪಚರಿಸಿದರು ಶುದ್ಧಮನದಿಂದ ॥ ೯ ॥

ಪುಣ್ಯಪುರುಷರು ಬಂದು ಯತಿಗಳ ।
ಗಣ್ಯನೆನಿಸುವ ಸಿದ್ಧಶರಣಗೆ ।
ಪುಣ್ಯದಾನಂದದಲಿ ಮಿಗೆಯುಪಚಾರವೆಸಗುತಲಿ ॥
ಕಣ್ಣುತೃತಿಯನಸಮ ಸುಯೋಗಿಗೆ ।
ವುಣ್ಣಗೊಟ್ಟರು ಷಡುರಸಾನ್ನವ ।
ಬಣ್ಣಿಸಲಿಕಳವಲ್ಲದಾ ಘನಭಕ್ತಿ ತೋರಿದರು ॥ ೧೦ ॥

ಇಂತು ಕೆಲಜನ ವುಪಚರಿಸುತಿರೆ ।
ಭ್ರಾಂತಪರಗುರು ನುಡಿದನೀ ಗ್ರಾ ।
ಮಾಂತರದಿ ನಾನಿಂತುವಾಸ ಮಾಡ್ವೆನೆಂಕೆನಲು ।
ಶಾಂತನಾನುಡಿ ಕೇಳ್ದು ಭಕ್ತರು ।
ಸಂತಸಂಬಡುತಾಗ ಪೇಳ್ದರು ।
ಚಿಂತೆದೂರನೆ ಇಲ್ಲಿ ನೆಲಸಿಯೆ ಪಾಲಿಸೆಮ್ಮಗಳ ॥ ೧೧ ॥

ಆದರಿಸಿ ಕೆಲರಿಂತು ವಚಿಸಲು ।
ಸಾಧು ಶರಣನ ಸನ್ನಿಧಿಯೊಳುಂ ।
ಭೇದಭಾವದ ಗೌಡರೇ ಮೊದಲಾದ ಪ್ರಮುಖರು ತಾವ್ ॥
ಭೇದಗೊಳ್ಳುತ ಬಂದುಪೇಳ್ದರು ।
ಆದರೀಸ್ಥಲವೀಯಲಾರೆವು ।
ಕ್ರೋಧಗೊಳದಲೆ ಪೋಗಿರೈ ನಿಮ್ಮಿಚ್ಛೆಯಿದ್ದೆಡೆಗೆ ॥ ೧೨ ॥

ಹೀಗೆ ವಚಿಸಲು ಗ್ರಾಮಪ್ರಭುಗಳು ।
ರಾಗವಿರಹಿತ ತಿಳಿದು ಭಾವವ ।
ಸಾಗಿದನು ಆ ಪೊಳಲನುಳಿಯುತ ವಿರಸಮನದಿಂದ ॥
ಪೋಗುತಿರೆ ತಾ ಮಾರ್ಗದಲ್ಲಿಯೆ ।
ಸಾಗಿದಂ ಗಂಗಪ್ಪ ಬಡಿಗನು ।
ಯೋಗಿವರ ತಾವ್ ಗಮಿಸಬೇಡಿರಿಯೆಂದು ಎರಗಿದನು ॥ ೧೪ ॥

ನೋಡಿ ಯತಿವರ ಪೇಳ್ದ ಭಕ್ತಗೆ ।
ಬೇಡವೈ ಈ ಗ್ರಾಮವಾಸವು ।
ಮೂಢಗುಣಯುತ ಜನರ ಸಂಗದಿಯಿರಲು ಮನವಿಲ್ಲ ॥
ಕಾಡಬೇಡವು ನೀನು ಯೆನಗೆನೆ ।
ಬೇಡಿಕೊಳುತಂ ನುಡಿದ ಬಡಗಿಯು ।
ನೀಡಿಪೋಗೈ ಬೋಧವಂ ತವಸ್ಮರಣದಿರುತಿಹೆನು. ॥ ೧೫ ॥

ಪರಮ ಭಕ್ತನ ವಚನವಾಲಿಸಿ ।
ಕರುಣವನು ಪೆರ್ಚಿಸುತ ಹೃದಯದಿ ।
ಗುರುವರನು ಅರುಹಿದನು ಗಂಗಪ್ಪೆಂಬ ಭಕ್ತಂಗೆ ॥
ತರುಳಯೆನ್ನಯ ನಾಮದಲಿ ನೀ ।
ಪರಮ ಗದ್ದುಗೆ ರಚಿಸಿ ನಿತ್ಯದಿ ।
ಮರೆಯದಲೆ ಪೂಜಿಸುತ ಮನದಾ ಬಯಕೆ ಪಡೆಯೆಂದ ॥ ೧೭ ॥

ಇಂತು ಶರಣನ ಆಜ್ಞೆ ಆಲಿಸಿ ।
ಶಾಂತಮನ ಗಂಗಪ್ಪ ತೋಷದಿ ।
ನಿಂತು ಕರಮುಗಿದೆರಗೆ ಚರಣಕೆ ಮತ್ತೆ ಗುರುನುಡಿದ ॥
ಸಂತಸದಿ ನಾನೊಂದು ಪೇಳುವೆ ।
ಕಾಂತಿವಡೆದಿಹ ಮೂರು ಕಾಲಲಿ ।
ನಿಂತು ಮೆರೆಯುವ ಮಂಚವೊಂದನು ಮಾಡು ನೀನೆಂದ ॥ ೧೮ ॥

ವಿನಯದಿಂ ಗಂಗಪ್ಪನೊಚಿಸಿದ ।
ಘನರೆ ನಿಮ್ಮಯ ಆಜ್ಞೆಯಂತೆಯೆ ।
ಮಿನುಪ ತೃತಿಯಾಕಾಲಿಲೆಸೆಯುವ ಮಂಚಮಾಡುವೆನು ॥
ಯೆನುತ ಪುನರಪಿ ನಮಿಸಿ ಗುರುಗಳ ।
ಅನುಮತಿಯ ಕೊಂಡಾಗ ನಡೆದನು ।
ವಿನುತ ಶ್ರೀಗುರು ಸಿದ್ಧನಿತ್ತಲು ಸಾಗಿದನು ಭರದೀ ॥ ೧೯ ॥

ಬರುತ ಪಥದೊಳು ಜನಸಮೂಹದಿ ।
ಇರುವ ದೃಗಪಡಹೀನರಿಗೆ ಸಲೆ ।
ಕರುಣಿಸುತ ದೃಷ್ಟಿಗಳ ಮೋಕ್ಷ್‌ಪದದಾನ ಮಾಡುತ್ತ ॥
ಮರುಳುಗಳ ಪೀಡೆಯನು ಬಿಡಿಸುತ ।
ಪಿರಿದು ಭಯಂಕರ ರೋಗದುಪಟಳ ।
ಹರಿಸುತಲಿ ನಡೆತಂದ ಶ್ರೀಗುರು ಕೋರಿ ಸಿದ್ಧೇಶ ॥ ೨೦ ॥

ಮದಯುತರಿಗಜ್ಞಾನ ತಿಮಿರವು ।
ವದಗಿರಲು ಯೇನೊಂದು ಗ್ರಹಿಸದ ।
ಹೃದಯರನು ಕಾಣುತಲಿ ಕರುಣವ ತಾಳಿ ಯೋಗೀಂದ್ರ ॥
ಸದಮಲಜ್ಞಾನಾರ್ಕ ಪ್ರಭೆಯಿಂ ।
ಸದೆದುಮರವೆಯು ತಮವ ಗುರುವರ ।
ಸದುಗುಣಿಗಳೆಸಗುತ್ತ ನಡೆದನು ಸಿದ್ಧಮಾರ್ಗದಲೀ ॥ ೧೯ ॥

ತುರಿಯತೀತಾವಸ್ಥೆಯಲಿ ಗುರು ।
ಬರುತಿರಲು ಬಹುಪುರದ ಜನಗಳು ।
ಯಿರದೆ ಬಂದೆರಗುತಲಿ ಕೇಳ್ದರು ದೇವಯೆಮ್ಮಗೆ ನೀ ॥
ಕರುಣಿಸೈ ಮಮಕೋರಿಕೆಗಳಂ ।
ಹರಿಸು ಭವಬಂಧನದ ಮೂಲವ ।
ಯಿರಿಸು ಆತ್ಮಜ್ಞಾನಗೇಹದಿಯೆಂದು ಪ್ರಾರ್ಥಿಸಿದರ್ ॥ ೨೦ ॥

ಕೇಳಿಕೊಳುತಿಹ ಭಕ್ತನಿಕರಕೆ ।
ಬಾಳದಯವನು ತೋರಿಯೋಗಿಯು ।
ಮೇಲುತೋಷದೊಳವರ ವಾಂಛಿತ ಪೂರ್ಣಗೊಳಿಸುತಲಿ ॥
ಪೇಳಲಸದಳವಾದ ಮಹಿಮೆಯು ।
ಜಾಳವನುಯೆಸಗುತ್ತ ನಡೆದಿರೆ ।
ಕಾಲಕಂಧರನೀತನೇ ಯೆಂದಾಡುತಿರೆ ಜನರು ॥ ೨೧ ॥

ನಡೆದುಬರುತಿರೆ ಮುಂಬದಿಯೊಳುಂ ।
ಸಡಗರದ ಸಂದಣಿಯೊಳ್ಮಿಗೆ ಸಿರಿ ।
ವಡೆದಹೊನ್ನಾಳೆಂಬ ಗ್ರಾಮಕೆ ಬಂದು ಗುರುರಾಯ ॥
ಕೂಡುತಿರಲಾಪುರದ ಅಡಿಯಲಿ ।
ಧಡಧಡಿಸಿತಾ ತುಂಬಿಹರಿಯುವ ।
ಬೆಡಗುನೋಡಿದ ಭೀಮನದಿಯಾ ಚಕಿತಭಾವದಲಿ ॥ ೨೨ ॥

ಹರಿದುಘೂರ್ಣಿಸುತಿರುವ ಸ್ವನದಿಂ ।
ಪರಿವಕಚ್ಛಪ ಮತ್ಸ್ಯಚಯದಿಂ ।
ನೆರೆಸು ಶುಭ್ರದತುಂತುರಾನ್ವಿತ ಚಂದ್ರಭಾಗವನು ॥
ಮೆರೆಯುತಿರ್ದುದು ಧರೆಜನಂಗಳ ।
ದುರಿತಕಳೆವೆನು ಭಕ್ತಿಯಿಂ ತವ ।
ಸ್ಪರುಶಗೈದಾಕ್ಷಣಕೆ ಯೆಂದುಲಿವಂತೆ ತೋರಿದುದು ॥ ೨೩ ॥

ನದಿಯ ಇಕ್ಕೆಲ ಬನಸಮೂಹದಿ ।
ಪುದಿದುಕೊಂಡಿಹ ಫಲದ ಕುಜಗಳು ।
ಮಧುರ ರಸದಿಂ ನಿಬಿಡವಾಗಿಯೆ ಯೆಸೆಯುತಿರುತಿರಲು ॥
ವಿಧವಿಧದ ಖಗಚಯವು ಸವಿಯುತ ।
ಪುದಿದ ಆನಂದದಲಿ ತಮ್ಮ ಸ್ವ ।
ನದ ಮಂಜುಳ ತೋರಿ ಜನರಿಗೆ ಮುದವಗೊಳಿಸುವವು ॥ ೨೪ ॥

ಇಂತೆಸೆವ ಮಹ ಭೀಮತೀರವ ।
ಸಂತಸದಿ ಯೋಗೀಂದ್ರ ಈಕ್ಷಿಸಿ ।
ಕುಂತನಲ್ಲಿಯೆ ದಾಟುವುದಕೆ ಪ್ರಯತ್ನವೇನೆನುತ ॥
ಭ್ರಾಂತಹರ ಹೀಗೆಂದು ಮನದೊಳು ।
ಚಿಂತಿಸುತ್ತಿರೆ ಆ ಸಮಯದಲಿ ।
ಅಂತು ಬಂದರು ಬಹುಜನಂಗಳ ಸಹಿಸನಾವಿಕರು ॥ ೨೫ ॥

ಬಂದ ಜನರಿಂ ಹಣವ ಕೊಳುತಲಿ ।
ಕುಂದಿರಿಸೆ ನವೆಯೊಳಗೆ ಶರಣನು ।
ಇಂದು ನಾವ್ಗಳು ಬರುವೆನ್ನೆಯೆಂದೆನುತ ಬಳಿಗ್ಹೋದ ॥
ಮಂದಮತಿಯುತ ಅಂಬಿಗರು ಯತಿ ।
ಅಂದವನು ಅರಿಯದಲೆ ನುಡಿದರು ।
ತಂದುಕೊಡು ರೊಕ್ಕವನು ಇಲ್ಲದೆಯಿರೆ ತಿರುಗುಯೆಂದರ್ ॥ ೨೬ ॥

ಗಾವಿಲರು ಶಿವಸಿದ್ಧಪುಂಗವ ।
ರಾವಿಮಲ ಮಹಿಮವನು ಬಲ್ಲರೆ ।
ಭಾವಿಸಲು ಕೌಶಿಕವು ದಿನಪನ ಪ್ರಕರಮರಿದಪುದೆ ॥
ದೇವನಾಭವ ಜಲಧಿ ಹರಿಸುವ ।
ಪಾವನನ ಡಡದಲ್ಲಿ ನಿಲ್ಲಿಸಿ ।
ಶೀವಿದುತ್ಸವದಿಂದ ನಿಖಿಲರು ನದಿಯದಾಂಟುತಿರೆ ॥ ೨೭ ॥

ಶಂಭುರೂಪಂ ಶರಣ ತನ್ನಯ ।
ಕಂಬಳಿಯ ಹಾಸುತ್ತ ಕುಳಿತುಂ ।
ಅಂಬುವಿನ ಮೇಲತಿ ವಿನೋದದಿ ಬರುವುದಂ ನೋಡಿ ॥
ಅಂಬಿಗರು ಆ ನಿಖಿಲ ಪಾಂಥರು ।
ನಂಬಿ ಸ್ಮರಿಸುತ್ತಿರಲು ಪುರಜನ ।
ತುಂಬಿ ತೀರದಿ ನೆರೆದು ಆಡಿದರದ್ಭುತಮಿದೆಂದು ॥ ॥ ೨೮ ॥

ಗುಳಗುಳುಸ್ವನದಿಂದ ಪರಿಯುವ ।
ಪೊಳೆಯೊಳಲೆಗಳ ಹೊಡೆತದಿಂದಲಿ ।
ಕೆಳಕೆಳಗೆ ಪರಿದೋಡುತಿರ್ದವು ನಾವೆಗಳು ಮತ್ತೆ ॥
ಕೆಲವು ಕುಜಗಳು ಕೀಳ್ದು ನಡೆದವು ।
ಮಲಹರನ ಕಂಬಳಿಯು ಗದ್ದುಗೆ ।
ಬಲುಮಹೋತ್ಸವದೊಳ್ಪ್ರನಾಹಕ್ಕೆದುರು ಬರುತಿಹುದು ॥ ೨೯ ॥

ಗುರುವರೇಣ್ಯನು ಕಂಬಲಾಸನ ।
ವೆರಸಿ ತೀರಕೆ ಬಂದಡಲ್ಲಿಯು ।
ನರರ ತಂಡವು ಪೂತಭಕ್ತಿಯೊಳೈದೆ ನಿಂದಿಹುತ ॥
ಕರಮುಗಿದು ನುತಿಸಲ್ಕೆಯೊಗಳ್ ।
ವರದ ಶ್ರೀಗುರು ಕೋರಿಸಿದ್ಧನು ।
ಹರುಷದಿಂ ಕಂಬಳಿಯ ಕೈಕೊಂಡಾಗಳೆದ್ದು ಬರೆ ॥ ೩೦ ॥

ನೀರು ಪೊರ್ದದಕಂಬಳಿಯನಾ ।
ಗೌರವಾನ್ವಿತ ಸಿದ್ಧಪೊದೆಯುತ ।
ನಾರಿಯನು ತೊರೆದಿತ್ತ ಬರಲಾನಾಡೆಯಿದನೋಡಿ ॥
ಪೌರಜನ ಆಶ್ಚರ್ಯಶ್ರದ್ಧಾ ।
ಪೂರ್ವಕಂ ಪೊರಮಟ್ಟು ಯತಿಯ ಕೈ ।
ಪಾರಸವನೊಲಿದೀಂಟಿ ಮಹಿಮೆಯ ಪೊಗಳತೊಡಗಿದರು ॥ ೩೧ ॥

ಮುಸುಡಿ ಚೌಡನು ಬಳಗಸಹಿತಂ ।
ಸಸಿನೆಯಿಂ ಪೊಳೆದಾಂಟಿ ಪೋಗಿ ।
ದರ್ಸನ ಮಹಿಮೆಯ ನೆನೆದು ಗುರುವರನಿಂದು ತೋರಿಸಿದ ॥
ಪೊಸಪರಿಯ ಲೀಲೆಯನು ಬಣ್ಣಿಸು ।
ತೊಸೆದು ಸರ್ವರು ಭಕ್ತಿಯಿಂ ಪರ ।
ವಶದಿಮಿಗೆ ಕೊಂಡಾಡಿ ದೈನ್ಯದಿ ಚರಣಕೆರಗಿದರು ॥ ೩೨ ॥

ಅನಿತರೊಳು ಅಂಬಿಗರು ತೀರದೊ ।
ಳನುವಿನಿಂ ನಾವೆಯನು ನಿಲಿಸುತ ।
ಜನಸಮೂಹದೆ ಕೂಡಿಬಂದಾ ಗುರುಗಳಂ ಕಂಡು ॥
ವಿನಯದಿಂ ಸಾಷ್ಟಾಂಗವೆಸಗುತ ।
ಘನಕೃಪಾಕರನೆಮ್ಮ ತಪ್ಪುಗ ।
ಳೆಣಿಸದಲೆ ಕಾರುಣ್ಯಭಾವದಿ ರಕ್ಷಿಪುದು ಯೆಂದರ್ ॥ ೩೩ ॥

ಪರಿಪರಿಯೊಳ್ ನುತಿಸುತ್ತ ಅಡಿಗೆರ ।
ಗಿರುವರಿಗೆ ದಯವಿಟ್ಟು ನುಡಿದನು ।
ಹರನಿರೂಪದೊಳಾದುದದು ನೀವ್ ಗೈದುದೇನಿಲ್ಲ ॥
ಹರುಷವಿದೆ ಚಿಂತಿಸಲುಬೇಡೆಂ ।
ದೊರೆವ ಸಿದ್ಧನ ಶಾಂತ ಭಾವವ ।
ನಲಿದು ಸಜ್ಜನರೊಪ್ಪಿ ಪಲವಂದದಲಿ ನುತಿಸಿದರು ॥ ೩೪ ॥

ಈ ಪರಿಯ ಧ್ವನಿಕೋರಿ ನುಡಿದರು ।
ತಾಪತ್ರಯ ಹರಶಂಭುವಿನ ಸಮ ।
ರೂಪಮತಿಯುತ ಯತಿಕುಲಾಗ್ರಣಿಯೆಮ್ಮ ಪುರದೊಳಗೆ ॥
ಕೋಪರಹಿತನೆ ನೆಲಸಿಯೆಮ್ಮಯ ।
ಪಾಪನಿಚಯದ ಕಲ್ಮಷಂಗಳ ।
ಲೋಪಗೈಯುತೆ ರಕ್ಷಿಸೈ ಪೊಂದಿರ್ದ ಆರ್ತರನು ॥ ೩೫ ॥

ಕೇಳುತಲಿ ಈ ದೈನ್ಯವಚನವ ।
ಪೇಳಿದನು ಪ್ರತಿವಚನವವನಿಗೆ ।
ಮೇಳಗೊಳ್ಳದುಮನ್ಮನವು ನಿಮ್ಮಲ್ಲಿಗೈತರಲು ।
ಬೀಳುಗೊಡುತವರಿಂಗೆ ಅಲ್ಲಿಂ ।
ದೇಳುತಲಿ ಮುಂದೈದು ಬರುತಂ ।
ಬಾಳಬೇಸರವಾಂತು ಕುಳಿತಂ ಮಧ್ಯಮಾರ್ಗದಲಿ ॥ ೩೬ ॥

ಬಂದುಕೂಡ್ರಲ್ಲಾಗ ಯತಿವರ ।
ನಂದುಕಾಣುತ ಹಾಲ್ಮತದವರ ।
ಸುಂದರೀ ಹನುಮವ್ವನೆಂಬಭಿದಾನಯುತಳಾಗ ॥
ವಂದಿಸುತ ಗುರುನಾಥನಂಘ್ರಿಗೆ ।
ತಂದು ಬಿಸಿಕ್ಷೀರವನು ಸಲಿಸುತ ।
ಲೆಂದಳಾಕೆಯು ನೀವು ಯಿಲ್ಲೇತಕ್ಕೆ ಕುಳಿತಿಹಿರಿ ॥ ೩೭ ॥

ವಿನಯದಿಂದಲಿ ಕೇಳ್ದಯುವತಿಗೆ ।
ಮನುಮಥಾರಿಯ ಸಮಸುಯತಿವರ ।
ನನುಕರಿಸಿ ಬೆಸಸಿದನು ಆಲಿಸು ಯೆನ್ನ ಅಭಿಮತವ ॥
ನಿನಗೆ ತಿಳಿಸುವೆ ಮಗಳೆ ಕೇಳಾ ।
ಯೆನಗೆ ಬೇಸರವಾಯ್ತು ಗಮನದಿ ।
ಯೆನುತಲರುಹಿದ ಸಿದ್ಧನಾಕೆಯ ಮನವ ನೋಡಲ್ಕೆ ॥ ೩೮ ॥

ಮುನಿವರನು ಹೀಗೆಂದು ನುಡಿಯಲು ।
ವನಿತೆಮಣಿ ಹನಮವ್ವ ಭಕ್ತಳು ।
ವಿನಯದಿಂ ನಮಿಸುತ್ತ ವಚಿಸಿದಳಾಗ ಗುರುವಿನೊಳು ॥
ಕನಲುಬೇಡ್ವೈ ಯೋಗಿನೀಯೆನ ।
ತನುವಿನಾ ಮೇಲಿರಿಸಿಕೊಳುತಲಿ ।
ನಿನ್ನ ಕೊಂಡುಂ ಪೋಗ್ವೆ ಭರದಲಿ ನಿಮ್ಮಭಾವದೊಲು ॥ ೩೯ ॥

ಕರಮುಗಿದು ಈ ರೀತಿ ವಚಿಸುವ ।
ತರುಣಿಮಣಿ ಹನುಮವ್ವ ನೋಳ್ಗುರು ।
ವರನು ನುಡಿದನು ಪಿರಿದು ತೋಷದ ಮನವ ತಾಳುತಲಿ ॥
ತರುಳೆಯೆನ್ನಯ ತೋರತನು ಬಲು ।
ಭಾರವಾಗಿರುತಿಹುದು ತಿಳಿ ಅದ ।
ಕಾರಣವು ಬೇಡೌ ಮಗಳೆ ಕೇಳೆಂದ ಸಿದ್ಧೇಂದ್ರ ॥ ೪೦ ॥

ಗುರುಗಳಾಡಿದ ವಿವರವಾಲಿಸಿ ।
ಪರಮಗುಣಿ ಹನಮವ್ವ ಯೋಗಿಯ ।
ಚರಣಪದ್ಮಗಳಿಂಗೆ ಯೆರಗುತಲಿಂತು ವಚಿಸಿದಳು ॥
ಕರುಣನಿಧಿ ಕೇಳ್ಮನದ ಸಂಶಯ ।
ತೊರೆದು ಕೂಡ್ರೈ ಯೆನ್ನಸ್ಕಂಧದೊ ।
ಳಿರಿಸು ನಿನ್ನಯ ಪಾದದ್ವಯಗಳ ಯೆಂದಳಾ ವನಿತೆ ॥ ೪೧ ॥

ನಿಗಮವೇದ್ಯನು ವಪ್ಪಿಕೊಳುತಲಿ ।
ಹೆಗಲಮೇಲೇರಿದನು ತೋಷದಿ ।
ವೊಗುಮಿಗೆಯೊಳ್ಪಥವಿಡಿದು ನಡೆದಳು ನಾಡೆಹನುಮವ್ವ ॥
ಲಗುಬಗೆಯೊಳ್ಪೋಗುತ್ತಲಿರುತಿಹ ।
ಬಗೆಯ ನಾನೇಂಬಣ್ಣಿಸಲಿ ಅಂದ್ ।
ಮಗುವೆ ನಿನ್ನಗೆ ಭಾರವಾಯಿತೆ ಯೆಂದ ಗುರುರಾಯ ॥ ೪೨ ॥

ಇಂತು ಶ್ರೀಗುರು ಕೋರಿಸಿದ್ಧನು ।
ಅಂತಃಕರುಣದಿ ಕೇಳಿ ತರುಣಿಯು ।
ಸಂತಸದ ಮನದಿಂದ ನುಡಿದಳು ಗುರುವೆ ಕೇಳೆನುತ ।
ಚಿಂತೆಬಿಡು ನನಗಿಲ್ಲ ನೀನೇ ।
ನಿಂತು ಈಗಾತ್ರದಲಿ ನೆಲಸೆ ತಾ ।
ನೆಂತು ತೋರ್ಪುದು ಬಾಧೆಕಿಂಚಿತ್ ಇಲ್ಲವೈ ಎಂದಳ್ ॥ ೪೩ ॥

ಮತ್ತೆ ನುಡಿದಳು ಸ್ವಾಮಿ ನಿನ್ನನು ।
ಹೊತ್ತು ಬರುತಿರೆ ನನ್ನ ಹೆಗಲಲಿ ।
ಹತ್ತಿದಂತೆಯೆ ಕಾಣಲೊಲ್ಲದು ಇದುವೆ ವಿಸ್ಮಯವು ॥
ಕೃತ್ತಿವಾಸನ ಸಮನೆ ತವಮಹಿ ।
ಮೋತ್ತಮವ ನಾನೇನು ಬಲ್ಲೆನೆ ।
ನುತ್ತ ಬರುತಿರೆ ಮುಂದೆ ತೋರ್ದುದು ಪುರವು ಸೊಬಗೆಂದ ॥ ೪೪ ॥

ಪುರದ ಬಹಿರಪ್ರದೇಶದಲಿ ಗುರು ।
ವರನನಿಳಿಸುತ ಶ್ರದ್ಧ ಭಾವದಿ ।
ತರುಳೆ ಶ್ರೀಗುರು ಕೋರಿಸಿದ್ಧನ ಚರಣಕೆರಗುತಲಿ ॥
ಕರುಣನಿಧಿ ತವದಯವು ಎನ್ನೊಳು ।
ವೆರಸಿ ರಕ್ಷಿಸು ಸತತಕಾಲದಿ ।
ಪರಮಧನ್ಯಳು ಆದೆನೈ ತವಸೇವೆಯೆಸಗುತ್ತ ॥ ೪೫ ॥

ಇಂತೆನುತ ಹನುಮವ್ವ ಭಕ್ತಳು ।
ನಿಂತು ಪ್ರಾರ್ಥನೆ ಮಾಡಲಾಗಳ್ ।
ಶಾಂತಹೃದಯದ ಶರಣನುಡಿದನು ಕರುಣರಸ ತುಂಬಿ ॥
ಕಾಂತೆಮಣಿ ಕೇಳವ್ವ ನಿನ್ನ ಸ ।
ಮಂತು ವಂಶವು ವೃದ್ಧಿಯಾಗುತ ।
ನಿಂತು ಮೆರೆಯಲಿ ಭಾಗ್ಯಲಕ್ಷ್ಮಿಯು ತವಗೃಹದೊಳೆಂದ ॥ ೪೬ ॥

ಅಂದು ಬೀಳ್ಕೊಡೆ ಶರಣಸಿದ್ಧನು ।
ವಂದಿಸುತ ನಡೆದೋದಳ್ಳೆ ತನ ।
ಮಂದಿರಕೆ ಗುರುವರನ ಮಹಿಮೆಯ ನೆನೆದು ಬಳಿಕಿತ್ತಲ್ ॥
ಮುಂದೆಸೆವ ನಾಲ್ವಾರ ನಗರದ ।
ಚಂದವನು ಬಣ್ಣಿಸಲಿಕಸದಳ ।
ವೆಂದು ನೋಡುತ ಕುಳಿತನೈ ಪುರಬಹಿರಭಾಗದಲೀ ॥ ೪೭ ॥

ಯೇನು ಶ್ಲಾಘ್ಯಸೆ ಮಾಡ್ದರರಿಯದು ।
ನೂನವಿಲ್ಲದ ವೃಕ್ಷಲತ ದು ।
ದ್ಯಾನಗಳು ಬಹುಸೊಂಪಿನಿಂದಲಿ ಮೆರೆಯುತಿರುತಿರಲು ॥
ಸಾನುರಾಗದೊಳುಲಿವ ಖಗಗಳು ।
ಮಾನಸಕೆ ಮಿಗೆ ತೋಷಗೊಳಿಸುತ ।
ತಾನು ಕಾಣ್ದುದು ಕಕುಭಿಧೀಶನ ಪೊಳಲತೆರದಂತೆ ॥ ೪೮ ॥

ಶಾಮಲಾಂಗಮದಾಗಿ ತೋರುತ ।
ಆ ಮಹಾಭ್ರಮರಾಳಿ ನಿಚಯದಿ ।
ಕೋಮಲದ ಶಾಖೆಗಳು ವರ್ಧಿಸೆ ಶುಂಡಿಲದ ತೆರದಿ ॥
ಭೂಮಹಿತ ತವೆ ದ್ರವಿಸುತಿರುತಿ ।
ಪರ್ ಮಹಾ ಮಕರಂದವಾರವು ।
ಮಾಮರಂಗಳು ಕಾಮಸಾಕಿದ ಸಾಮಜದ ಪರಿಯೋಲ್ ॥ ೪೯ ॥

ರಾಮಣೀಯಕವಾದ ಕುಜಗಳ ।
ಸೋಮದಿಂದಲಿ ಯೆಸೆವುದಲ್ಲದೆ ।
ತಾಮರಸ ನಿಕರಂಗಳಾಂತಿಹ ನಿರ್ಮಲೋದಕದಿಂ ॥
ಕಾಮಿತವ ಸಲಿಸಲಿಕೆ ಬರುವೊಲ್ ।
ಪ್ರೇಮದಿಂದೈತರುವ ಅಳಿಖಗ ।
ಸಾಮಜಾಕೇಳಿಯ ಸದನವೆನೆ ತೋರ್ವ ಸರಸಿಗಳು ॥ ೫೦ ॥

ನವಿಲು ನರ್ತನವಾಡೆ ಅಳಿಗಳ ।
ರವವು ಚುಂಬಿರೆ ಕೋಕಿಲಗಳ ಸ್ವ ।
ನವ ಪಿಡಿದೆನಿಸುತಲಿ ಕೇಳ್ವದು ಪಥಿಕರಾ ಕಿವಿಗೆ ॥
ಸುವಿಮಲದ ಸೌರಂಭ ಸೊಬಗಿಂ ।
ಅವನತಿಯ ಗೊಳ್ಳದೆ ವಸಂತಗೆ ।
ಅವಿರತಂ ಸೇವಿಪಳೊ ಬನದೇವಿಯು ಯೆನುತ್ತೆಸೆಯೆ ॥ ೫೧ ॥

ಗಗನ ಚುಂಬಿತ ಸೌಧಗಳು ತಾವ್ ।
ಝಗಝಗಿಪ ಪ್ರಭೆಯಾಂತು ತೋರುತ ।
ಮಿಗಿಲು ಅಮರಾಪುರಿಗಿದೆನ್ನುವ ಯಶವನು ತಾಳ್ದು ॥
ಸೊಗಸಿಸುವ ಸಾಲ್‌ವೀಧಿ ನಿಕರದಿ ।
ಅಗಣಿತದ ಸೌಭಾಗ್ಯವಡೆದಿಹ ।
ಸುಗುಣಿ ಪ್ರಜೆಗಳ ಗಡಣದಿಂ ಮಿಗೆ ಮೆರೆದುದೇನೆಂಬೆ ॥ ೫೨ ॥

ಸಟೆಯನೆಂದಿಗೆ ನುಡಿಯಲಾರರು ।
ಕುಟಿಲಮನುಜರ ಸೇರಲಾರರು ।
ಕಟುಕಮನವನು ಮಾಡಲಾರರುಯೆಂದಿಗಾದರೆಯು ॥
ಧಿಟ್ಟರಾಗಿಯೆ ವರ್ತಿಪರು ತವೆ ।
ನಿಟಲ ನಯನನ ಧ್ಯಾನ ಮನದೊಳು ।
ಪಠಿಸುವರು ಅತಿಚತುರರಾಪುರದಖಿಲ ಜನರುಗಳು ॥ ೫೩ ॥

ಭೋಗಭಾಗ್ಯವು ಸಕಲ ಸಂಪದ ।
ಪೂಗವನು ಯೆಡೆಗೊಂಡು ರಾಜಿಸಿ ।
ನಾಗಶಯನನ ಸತಿಯನಿಲಯದ ಪರಿಯೊಳ್ ಭಾಸಿಪುದು ॥
ಮೇಗೆನಿಪ ಪತಿಭಕ್ತಿಯಾಂತಿಹ ।
ಸೋಗೆ ನಯನದ ಸಾಧ್ವಿಮಣಿಯರು ।
ರಾಗದಿಂದಲಿ ಭರ್ತೃದೇವನ ನಂಬಿ ವರ್ತಿಪರು ॥ ೫೪ ॥

ಇಂತೆಸೆವ ನಾಲ್ವಾರ ಪುರದಾ ।
ದ್ಯಂತ ಸಂಭ್ರಮ ನೋಡಿ ಗುರುವರ ।
ಸಂತಸಂ ಬಡುತಿರ್ದ ಮನದೊಳು ನಾಡೆ ನಲಿನಲಿದು ॥
ನಿಂತುಕೊಳ್ಳಲು ಯೋಗ್ಯವೆನ್ನುತ ।
ಶಾಂತ ಶ್ರೀಗುರು ಕೋರಿಸಿದ್ಧನು ।
ದಾಂತಮನದಲಿ ನಿರ್ಧರವ ತಾಗೈದಮುದದಿಂದ ॥ ೫೫ ॥

ಪುರದ ಪೊರಬದಿಯಲ್ಲಿ ತೋರುವ ।
ಮುರಗಿಸ್ವಾಮಿಯ ದೇವರಾಲಯ ।
ದಿರಲು ಅಲ್ಲಿಗೆ ಬಂದು ಸಿದ್ಧನು ಮೂರ್ತಮಾಡಿದನು ॥
ಕರುಣನಿಧಿ ಕೂಡ್ರಲ್ಕೆ ಅಲ್ಲಿಗೆ ।
ಬರುವ ಜನತತಿಯೊಳಗೆ ತಾವರ ।
ತರುಣಿಮಣಿ ಜೇವರಿಗಿ ನೀಲಮ್ಮೆಂಬ ಘನಭಕ್ತೆ ॥ ೫೬ ॥

ಬಂದು ದೇವರಪೂಜೆ ತೀರಿಸಿ ।
ದ್ವಂದ್ವಕರಗಳ ಮುಗಿದು ನಮಿಸುತೆ ।
ನಿಂದು ನೋಡಿದಳಾಗ ಅಲ್ಲೇ ಇರ್ಪ ಸಿದ್ಧನನು ॥
ಬಂಧು ಭಕ್ತಿಯೊಳ್ ಚರಣಕೆರಗುತ ।
ತಂದೆ ತಾವ್ ಎಲ್ಲಿಂದ ಬಂದಿರಿ ।
ಯೆಂದು ವಿನಯದಿ ಕೇಳಲಾಗಳ್ ಯತಿಯು ತಾನುಡಿದ ॥ ೫೭ ॥

ತರುಳೆ ಕೇಳೌ ಎಮ್ಮ ವಚನವ ।
ಚರಿಸುತಲಿ ಬಹುಪುರಗಳನು ನಾ ।
ಬರಲು ಈ ಪುರದಿರವ ಕಾಣುತ ಮನಕೆ ಮುದವಾಯ್ತು ॥
ಪರಮ ಶಿಷ್ಯರ ಭಕ್ತಿನೋಡುತ ।
ಯಿರುವುದಿಲ್ಲಿಯೆಯೆಂದು ಉಳಿತೆವು ।
ಭರದಿ ಕೇಳೌಯೆಮ್ಮ ಮನಸಿನ ಬಯಕೆಯಿಂತಿಹುದು ॥ ೫೮ ॥

ಆಲಿಸುತ ಯತಿವಚನವನು ತಾ ।
ಬಾಲೆ ನುಡಿದಳು ನಿಮ್ಮ ಹೆಸರನು ।
ಪೇಳುವುದು ಮಹಯೋಗಿಯೆಂದೆನುತೆರಗಿದಳು ಮತ್ತೆ ॥
ಕೇಳು ಕೋರೀ ಸಿದ್ಧನೆಂದುಂ ।
ಪೇಳಿಸಿಯೆಕೊಳುತಿಹೆನು ನಾಂ ಧರೆ ।
ಲೀಲೆ ನೋಡುತ ಬಂದೆನೌ ಎನೆ ಕೇಳ್ದು ನೀಲಮ್ಮ ॥ ೫೯ ॥

ಬಾಳಸಂತೋಷವನು ಹೃದಯದಿ ।
ತಾಳಿತಾ ತಂದಿರ್ದಯೆಡೆಯನು ।
ಶೂಲಕರಸಮ ರೂಪಯುತಿ ಅಡಿವಿಡಿದು ವಿನಯದಲಿ ॥
ಪೇಳಿದಳು ತಾವ್ ಈ ಪ್ರಸಾದವ ।
ಮೇಳಗೊಳಿಸಿರಿ ವುದರಕೀಗಳ್ ।
ಜಾಳುಮಾಡದಿರೆನ್ನಪೇಕ್ಷೆಯನೆಂದಳಾ ಅಬಲೆ ॥ ೬೦ ॥

ನೋಡುತಲಿ ಭಕ್ತಿಯನು ಅಬಲೆಯೊ ।
ಳಾಡಿದನು ಸಿದ್ಧೇಂದ್ರ ಕರುಣವ ।
ಗೂಡಿ ಮಗಳೇ ನಿನ್ನಗಾತ್ರದ ಸ್ಥಿತಿಯನಿಕ್ಷಿಸಲು ॥
ಖೋಡಿಯಾಗಿಯೆ ತೋರ್ಪುದಿದು ಬಹು ।
ಕೇಡುಮಾಳ್ಪುದು ಇದರ ವ್ಯಥೆಯನು ।
ಮಾಡಬೇಡೌ ನಾನು ರಕ್ಷಿಪೆನೆಂದ ಗುರುರಾಯ ॥ ೬೧ ॥

ತವಕದಲಿ ಗುರು ಇಂತು ನುಡಿಯಲು ।
ಯುವತಿಮಣಿ ನೀಲಮ್ಮ ಭಕ್ತೆಯು ।
ಕವಲುಬೇಡೈ ನಿನ್ನಮನದೊಳು ಯೆನ್ನವಿಷಯದಲಿ ॥
ಕುವರಿಯೆಂದರಿದೀಗ ರಕ್ಷಿಸು ।
ತವಹಿತಕೆ ಬೇಕಾದ ವಸ್ತುವ ।
ಅವಿರತಾಕಾಲದೊಳು ವದಗಿಸುವೆನು ಯೆನಲು ಸುಮತಿ ॥ ೬೨ ॥

ಸನುಮತವಗೊಂಡಾಗ ಸಿದ್ಧನು ।
ವನುತೆ ನೀಲಾಂಬಿಕೆಗೆ ಇರುತಿಹ ।
ಘನಮಹಾರೋಗವನು ಕಳಿದನು ದೃಷ್ಟಿಮಾತ್ರದಲಿ ॥
ಯೆನಿತು ಪೇಳುವುದವರ ಮಹಿಮೆಯ ।
ಜನತತಿಯು ಕೊಂಡಾಡೆ ಪರಿಪರಿ ।
ದಿನದಿನದೊಳುಂ ಬರುತಲಿರ್ದುದು ಸೇವೆಯೆಸಗಲಿಕೆ ॥ ೬೩ ॥

ಪರಮತರದೀ ಯತಿಪುರಾಣವ ।
ನುರುಮುದದೊಳೋದುವರಿಗಂ ಪೇ ।
ಳ್ವರಿಗೆ ಆಲಿಸುವರಿಗೆ ಸದ್ಗುರು ಕೋರಿಸಿದ್ಧೇಶಂ ॥
ಚಿರತರಾಯುರರೋಗ್ಯವೈಸಿರಿ ।
ಪರಮವಿದ್ಯೆ ಸುಭಕ್ತಿಮೊದಲಾ ।
ಗಿರುವ ಸತ್ಫಲಗಳನು ಕರುಣಿಸುತಿರ್ಪ ನಿದುದಿಟವು ॥ ೬೪ ॥

ಅಂತು ಸಂಧಿ ಏಳಕ್ಕಂ ಪದನು ೨೬೪ ಕ್ಕಂ ಮಂಗಲಂ ಮಹಾ

ಶ್ರೀ ಶ್ರೀ ಶ್ರೀ

॥ ಶ್ರೀಗುರು ಕೋರಿ ಸಿದ್ಧೇಶ್ವರಾಯನಮಃ ॥



# ಎಂಟನೆಯ ಸಂಧಿ

ಸೂಚನೆ—ಪರಮ ಶ್ರೀಗುರು ಕೋರಿಸಿದ್ಧನು ।
ದುರಳ ಪೈಶಾಚಿಯನು ಬಂಧಿಸಿ ।
ವರ ಶಿವಾದ್ವೈತವನು ಗ್ರಹಿಸಿದ ತನ್ನ ಗುರವಿಂದ ॥

ಸಲ್ಲಲಿತ ಮಹಿಮಾಸ್ಪದಂ ಪದ ।
ಪಲ್ಲವದಿ ಭೂಮಿಯೊಳು ಚರಿಸುತ ।
ದಲ್ಲದಾಕಾಶದೊಳು ಚರಿಸುತ ಲಂಕೆಯೊಳು ಪೋಗಿ ॥
ಬಲ್ಲಿದ ವಿಭೀಷಣನ ಬಯಕೆಯ ।
ಸಲ್ಲಿಸುತಲಾಗಸ್ತ್ಯನಿಗೆ ಮಿಗೆ ।
ವುಲ್ಲಸದಿ ಶಿವತತ್ವವನುಹಿದ ರೇಣುಕನೆ ಪಾಹಿ ॥೧॥

ಪ್ರತಿದಿನದಿ ತಪ್ಪಲೆ ನಾಲ್ವಾರ್ ।
ಮತಿಯುತೆ ಸುನೀಲಾಂಬೆ ಗೇಹಕೆ ।
ಯತಿ ಸುಸಿದ್ಧನು ಬಂದು ಶಿವಪೂಜಾದಿಗಳ ಮುಗಿಸಿ ॥
ಮಿತಿಯು ಶಾಲೀವಾಹನದ ಶಕ ।
ವಿತತಮಾದಾ ಸಪ್ತದಶ ಶತ ।
ದತುಳಮೇಲೈವತ್ತೆರಡು ಸಂಖೆಗೆ ಸರಿಯದಾದ ॥೨॥

ವದಗಿದ ಪ್ರಮೋದೂತ ವತ್ಸರ ।
ವಿದಿತವಹ ಶ್ರಾವಣ ಸುಮಾಸದಿ ।
ಪುದಿದುಕೊಂಡಿಹ ಬಹುಳ ನವಮಿಯ ಚಂದ್ರವಾಸರದಿ ॥
ಮುದಗೊಡುವ ನಾಲ್ವಾರ ಪುರದೊಳು ।
ಸದಯ ಶ್ರೀಗುರು ಕೋರಿಸಿದ್ಧನು ।
ಪದುಳದಿಂ ಪಾಲಿಸುತಲಿರ್ದಾ ಭಕ್ತಜನರನ್ನು ॥ ೩ ॥

ಇರುತಿರಲ್ ತಾಂ ಕೆಲದಿನಂಗಳು ।
ಜರುಗಿ ಪೋಗಲು ಸಿದ್ಧನಾಥನು ।
ಮುರಗಿಸ್ವಾಮಿಯ ಗದ್ದುಗೆಯ ಬಳಿವಾಸಿಪನು ನಿತ್ಯಂ ॥
ಬರುತಿರುವ ಭಕ್ತಾದಿಗಳು ತಾವ್ ।
ಗುರುವಿನೊಳು ವಿನಯದಲಿ ನುಡಿದರು ।
ಇರಲುಬೇಡೈ ಇಲ್ಲಿ ಬ್ರಹ್ಮಪಿಶಾಚಿಯಿಹುದೆಂದರ್ ॥ ೪ ॥

ಮತ್ತೆ ಪೇಳ್ದರು ದೈನ್ಯದಿಂದಲಿ ।
ಕೃತ್ತಿವಾಸನ ಸಮುಸುಯೋಗಿಗೆ ।
ಕತ್ತಲೆಯೊಳಲ್ಲಿರುವ ಜನರಿಗೆ ಬಹಳ ಭಯತೋರಿ ॥
ಮೃತ್ಯುಗೊಳಿಸಿಹುದಾದ ಕಾರಣ ।
ನಿತ್ಯ ನೀನಿಲ್ಲಿರಲಿಬೇಡವೆ ।
ನುತ್ತ ಬಹುಪರಿ ಬೇಡಿಕೊಳ್ಳಲ್ಕಾಗ ಸಿದ್ಧೇಂದ್ರ ॥ ೫ ॥

ನಸುನಗುತ ಗುರುವರನು ಅವರಿಗೆ ।
ವುಸುರಿದನು ನಾವ್ ಇಲ್ಲೆಯಿರುತಲಿ ।
ಕುಸಿಸುವೆನು ಆ ಬ್ರಹ್ಮರಕ್ಕಸಗಿರುವ ಬಿಂಕವನು ॥
ವಸುಧೆ ಜನರಿಗೆ ಕೊಡುವ ಪೀಡೆಯು ।
ನಸಿಸಿಪೋಗಲಿಯೆಂದು ವುಸುರುತ ।
ವೊಸೆದು ನೋಡಿರಿ ಈ ದಿನದರಾತ್ರಿಯೊಳು ನೀವೆಂದ ॥ ೬ ॥

ಯೋಗಿಸಿದ್ಧನು ನುಡಿದ ವಿಷಯಕೆ ।
ತೂಗಿದರು ಶಿರವಖಿಲ ಭಕ್ತರು ।
ಹೇಗಿಹುದೊ ಆ ಮಹಿಮೆ ನೋಡಲುಬೇಕು ಎಂದೆನುತೆ ॥
ಸಾಗಿಬಂದರು ಮಧ್ಯನಿಶಿಯೊಳು ।
ಭೋಗಿಕಂಕಣ ಸಮಯತಿಗೆ ಯೆದು ।
ರಾಗಿ ಕುಳಿತರು ಬಹಳಭೀತಿಯಗೊಂಡು ಕೆಲಜನರು ॥ ೭ ॥

ಘೋರ ಆಕೃತಿಯಾಂತು ತಾ ಬಲು ।
ಮೀರಿದಾ ಕಳೆಯಿಂದಲೆಸೆಯುತ ।
ಸಾರಿಬಂದುದು ಸಿಡಿಲಿನಬ್ಬರ ತೋರ್ದುರಭಸದಲಿ ॥
ಭೂರಿಘರ್ಜಿಸುತೆತಿಯ ಎದುರಿಗೆ ।
ತೋರಿನಿಂದುದು ಬಾಯಿ ಮೂಗು ವಿ ।
ಕಾರಗೊಳಿಸುತ ಬಹುಭಯದೊಳತಿ ಕ್ರೂರರೂಪಿನಲಿ ॥ ೮ ॥

ನೆರೆದು ದೂರದಿ ನೋಡುವಾಜನ ।
ಸರಿದರ್ಹಿಂದಕೆ ಭೀತಿಯಿಂದಲಿ ।
ಪರಮಗುರು ಸಿದ್ಧೇಂದ್ರನೋಡ್ದನು ಯೋಗದೃಷ್ಟಿಯಲಿ ॥
ಮರುಳು ಕಂಪನಗೊಂಡು ಕನಲುತ ।
ಥರಥರನೆ ನಡುಗುತಲಿ ಗುರುವಿನ ।
ಚರಣಕೆರಗುತ ಬೇಡಿಕೊಂಡಿತು ರಕ್ಷಿಪುದುಯೆನುತಾ ॥ ೯ ॥

ತಾಪಸೇಂದ್ರಾ ಸಿದ್ಧನೆದುರಿಲಿ ।
ರೂಪು ಕೋಮಲವಾಂತು ನಿಲ್ಲುತ ।
ಪಾಪದೂರನೆ ತವನಿರೂಪಣದಂತೆ ನಡೆಯುವೆನು ॥
ಈ ಪರಿಯೊಳ್ನುಡಿಯಲ್ಕೆ ರಕ್ಕಸ ।
ಕೋಪರಹಿತನು ದಯದಿ ಪೇಳ್ದನು ।
ಪೋಪುದೆಲ್ಲಿಗು ಬೇಡ ನೀನಾರಿಂಗು ಭಯಕೊಡದೆ ॥ ೧೦ ॥

ಇಂದಿನಿಂ ನೀನಿಲ್ಲೆ ಇರು ಯೆಂ ।
ದಂದು ಆಜ್ಞೆಯ ಮಾಡೆರಕ್ಕಸ ।
ಸಂದಗುರುವಚನದೊಲು ಅಲ್ಲಿಯೆವಾಸಿಸಿತು ಮುದದೆ ॥
ಬಂದು ಭಕ್ತರು ನೋಡಿದರು ಅದ ।
ರಂದವನು ನಲವಾಂತು ಯತಿಸಿ ।
ದ್ಧೇಂದ್ರನಾಪದಕೆರಗಿ ಆತನ ಮಹಿಮೆ ಕೊಂಡಾಡೆ ॥ ೧೧ ॥

ಕಾತ ಗುರುವರ ಕೋರಿಸಿದ್ಧನು ।
ಈ ತೆರದ ಮಹಿಮೆಯನು ತೋರಿಸಿ ।
ಭೂತನಿಳಿದ ಸ್ಥಲದುಪರಿಯತಿ ಶಿಲೆಯಕಂಭವನು ॥
ಪ್ರೀತಿಯಿಂ ನೆಡಿಸುತಲಿ ಜನರಿಗೆ ।
ಸಾತಿಶಯದಿಂ ನುಡಿದನಿದಕುರು ।
ವೋತು ಭಕ್ತಿಯೊಳ್ನಮಿಸಿದವರಿಗೆ ಇಷ್ಟಸಿದ್ಧಿಪುದು ॥ ೧೨ ॥

ಎಂದು ಯತಿವರ ಪೇಳಲಾಗಳ್ ।
ಬಂದು ಪುರದೊಳು ಶಿದ್ಧನೆಸಗಿದ ।
ಬಂಧುರದ ಮಹಮಹಿಮೆ ವಿವರವ ಅರುಹಲಾಕ್ಷಣದಿ ॥
ಅಂದು ಘನಮುದವಾಂತು ಬಹುಜನ ।
ವೃಂದಗೂಡುತ ಭಕ್ತಿಯಿಂದಲಿ ।
ತಂದು ಪೂಕಾಯ್ಗಳನು ಸೌರಭ ವಸ್ತ್ರಸಹಿತಾಗಿ ॥ ೧೩ ॥

ವರಸುಮತಿ ದೊಡ್ಡಪ್ಪ ಗೌಡನು ।
ಪರಮಸ್ಥಿತಿ ಸಾಹೇಬ ಪಾಟೇಲ್ ।
ನೆರಸಿ ನಿಖಿಲಧನಿಕ ಸುವೃಂದವು ಗೂಡಿಮುದದಿಂದೆ ॥
ಗುರುವರನ ಬಳಿಗೈದು ಸರ್ವರು ।
ಯೆರಗಿದರು ಬಹುಭಕ್ತಿಯಿಂದಲಿ ।
ಪುರಹರನ ಸಮಯೋಗಿಯೆಮ್ಮನು ರಕ್ಷಿಸೆಂದೆನುತ ॥ ೧೪ ॥

ವ್ಮೃಡನ ಸದೃಶದ ಯತಿವರೇಣ್ಯಗೆ ।
ನುಡಿದರ್ಕೈ ಬಹುವಿನಯದಿಂದಲಿ ।
ಬಿಡಲುಬೇಡೈ ನಮ್ಮ ಗ್ರಾಮವನೆಂದು ಮುಖ್ಯಜನ ॥
ಅಡಿಗೆರಗುತಲಿ ಬೇಡಿಕೊಳ್ಳಲು ।
ವೊಡನೆ ನುಡಿದನು ಸಿದ್ಧನವರಿಗೆ ।
ಕೊಡುವುದಾದಡೆ ನಮ್ಮ ವಾಂಛಿತವಿಲ್ಲೆ ಸೆಲಸುವೆವು ॥ ೧೫ ॥

ಆಲಿಸುತ ಗುರುಲಪಿತ ಗೌಡರು ।
ಕೇಳಿಕೊಳ್ಳಿರಿ ತಮ್ಮ ಅಭಿಮತ ।
ಜಾಳುಮಾಡದೆ ನಡೆಸಿಕೊಡುವೆವು ಎಂದು ಪೇಳಿದರು ॥
ಬಾಳತೋಷವನಾಂತು ಗುರುವರ ।
ಪೇಳಿದನು ನಮಗಿಲ್ಲ ಸ್ಥಲವದು ।
ಪಾಲಿಸಿದಡಾವಿಲ್ಲೆ ವಾಸಿಪೆವನವರತ ನಿಜವು ॥ ೧೬ ॥

ಎನಲು ಸಿದ್ಧನು ಕೇಳಿ ಗೌಡರು ।
ಎನಿತು ಭೂಮಿಯು ಬೇಕು ತಿಳಿಸೈ ।
ಎನಲು ಗುರುವರ ತನ್ನ ಕರದಿಹ ದಂಡವನು ಕೊಂಡು ॥
ಮನಕೆ ಬಂದಂದಲಿ ಅಳೆಯುತ ।
ಯಿನಿತು ಭೂಮಿಯ ಕೊಡುವುದೆಂದೆನೆ ।
ಸನುಮತಿಸಿ ಇದಕಿಂತ ಅಧಿಕವು ಕೊಡುವೆನಾವೆಂದರ್ ॥ ೧೭ ॥

ಹೀಗೆ ವಾಗ್ದಾನವನು ಮಾಡುತ ।
ಬೇಗ ಮಠವಿಸ್ತರದಿ ರಚಿಪುದ ।
ಕಾಗಬೇಕಾದಂಥ ಸಂಗ್ರಹ ತರಿಸಿದರು ಜವದಿ ॥
ಸಾಗಿಸುತ ಬಹು ಭರದಿ ಮಠವನು ।
ರಾಗದಿಂದಲಿ ಮಾಡಿಸಿದರ್ಕೈ ।
ಮೇಗೆನಿಪ ಚಲುವಡೆದು ಶೋಭಿಸುವಂತೆ ಶ್ರದ್ಧೆಯೊಳು ॥ ೧೮ ॥

ನೋಡಿ ಮಠವನು ಗುರುಕುಲೇಂದ್ರನು ।
ಗಾಢಸಂತೋಷವನು ತಾಳುತ ।
ಮಾಡಿದನು ವಾಸವನು ಮನವದುಯೆತ್ತ ತೊಲಗದಲೆ ॥
ಕೂಡಿಯಿರುತಿಹ ಶಿಷ್ಯಚಯದಿಂ ।
ದಾಡಲೇಂ ಬಹುದೂರದಿಂ ಜನ ।
ನೋಡಬರುತಿಹರವರು ತಮ್ಮಯ ಬಯಕೆ ಕೈಗೊಳಲು ॥ ೧೯ ॥

ದಿನದಿನದೊಳಾ ಕೋರಿಸಿದ್ಧನ ।
ಘನತರದ ಯಶಪೆರ್ಚಿಸುತ್ತಿರೆ ।
ಎನಿತೆನಿತೊ ದೇಶಗಳ ಭಕ್ತರು ಬಂದುವಂದಿಸುತ ॥
ತನತನಗೆ ಬೇಕಾದ ಬಯಕೆಯ ।
ಅನುಕುಲವಗೊಳುತಾಗ ಶರಣನ ।
ಮಿನುಪ ಮಹಿಮೆಯ ಬಣ್ಣಿಸುತ ಪೋಗುವರು ಸಂತಸದಿ ॥ ೨೦ ॥

ಇರುತಿರಲು ಕೆಲದಿನವು ಈ ಪರಿ ।
ತರುಣಿ ನೀಲಾಂಬಿಕೆಯ ಕುಟಿರದಿ ।
ಗುರುವರನು ಪ್ರತಿನಿತ್ಯ ತ್ರೈಕಾಲವನು ಮೀರದಲೆ ॥
ಪರಮ ಲಿಂಗಾರ್ಚನೆಯ ಗೈಯುತ ।
ಪಿರಿದು ಷಡ್ರಸ ಪಾಕವನು ಘನ ।
ತರದ ಸಂತಸದಿಂದಲಾರೋಗಣೆಯ ಸಲಿಸುತ್ತ ॥ ೨೧ ॥

ಭಸಿತರುದ್ರಾಕ್ಷಿಗಳ ಕಾವಿಯ ।
ವಸನಗಳನಂಗದೊಳು ಧರಿಸುತ ।
ಲಸಿತದಂಡವ ಪಿಡಿದು ಕರದೊಳು ಸರಸ ಭಾವದೊಳು ॥
ಮಿಸುನಿವಟ್ಟವಬಿಟ್ಟು ಬಂದಿರು ।
ವಸಮ ನೇತ್ರನೆ ತಾನೆನಿಸುತೀ ।
ರಸೆಯೊಳಗೆ ಶೋಭಿಸಿದ ಕೋರೀಸಿದ್ಧಗುರುವರನು ॥ ೨೨ ॥

ಸಕಲ ಶಾಸ್ತ್ರಪುರಾಣಗಳನಾ ।
ಅಕುಟಿಲದ ಮನದಾಗಮಿಸಿ ಬಹು ।
ಭಕುತಿಯಿಂ ಕೇಳುವರಿಗೊರೆಯುತ್ತವುಗಳಲ್ಲಿರ್ಪ ॥
ಸುಕರವಹ ತತ್ವಗಳ ಮಿಗೆ ಮಾ ।
ಜ್ಞಕರದಿಂ ಬೋಧಿಸುತ ಕರ್ಣಕೆ ।
ಸುಖವೆನಿಸಿ ಸನ್ಮಾರ್ಗದೊಳಗವರನ್ನು ನಡೆಸುವನು ॥ ೨೩ ॥

ಶಿವವಚನವೆನಿಪಾಗಮಂಗಳ ।
ನಿವಹವನು ಶೋಧಿಸಿತದಂತರ ।
ವಿವರವನು ತಿಳಿದಭವ ವಿದ್ಯಾವಿಭವದಿಂ ಮೆರೆದು ॥
ಧವಳ ಕೀರ್ತಿಯ ತಾಳಿನೆರೆ ಶಾಂ ।
ಭವಸುಯೋಗದೊಳಾಳುತನುದಿನ ।
ಭುವನದೊಳು ಶಿವಮತವನುದ್ಧರಿಸುವನು ಗುರುವರನು ॥ ೨೪ ॥

ಶಮದಮಾದಿ ಗುಣಂಗಳೀತಗೆ ।
ತಮಗೆ ತಾವೇ ಲಭಿಸಿದವು ನಿ ।
ರ್ಮಮತೆಯುಳ್ಳುದರಿಂದ ಬಂದತಿಥಿಗಳು ಬೇಡಿದುದಂ ॥
ವಿಮಲಮಾನಸದಿಂದ ನೀಡುವ ।
ನಮಿತ ಸಂತೋಷವನು ತಾಳುವ ।
ನಮಗೆ ನಿಮಗೆಂತೆಂಬ ಭೇದವ ಮಾಡನೆಂದೆಂದು ॥ ೨೫ ॥

ಕಾಮಿಸದಲೆಂದೆಂದು ಫಲವನು ।
ಕಾಮವೈರಿಯ ಪೂಜಿಸುವ ನಿಃ ।
ಕಾಮವೆನೆ ಕಾಲನಭಯವನುತ್ತರಿಸಿದನು ಬಿಡದೆ ॥
ಭೂಮಹಿತ ಮಹಿಮೆಗಳ ತೋರುತ ।
ಸ್ವಾಮಿಯೆನಿಸುತ ಸಕಲ ಜನರಿಗೆ ।
ಕಾಮಿತಾರ್ಥಗಳನು ಕೊಡುವ ಮಾದೇವನೆನಿಸಿದನು ॥ ೨೬ ॥

ಬಂದು ಕೆಲವರು ನುತಿಸುವರು ಮ ।
ತ್ರಿಂದುಧರನೆಂದರ್ಚಿಸುವರು ಮು ।
ದಂದಳೆದು ಸನ್ನಿಧಿಯೊಳಾಶ್ರಿತರೆನಿಸಿ ಬಾಳುವರು ॥
ಹಿಂದು ಮುಂದಿನ ಬಳಗಗಳ ತಾ ।
ಯ್ತಂದೆ ತಮ್ಮಂದಿರುಗಳೆಂಬುವ ।
ದಂದುಗವ ಬಿಟ್ಟಿಹನು ಸಿದ್ಧೇಶ್ವರನ ದಯೆಯೆನಿತೊ ॥ ೨೭ ॥

ಪೊಡವಿಯೊಳು ಧೈರ್ಯವನು ಬಿಡದಲೆ ।
ನಡೆವುದೈ ಸನ್ಮಾರ್ಗದೊಳು ತಾ ।
ವಡಸಿದೊಡೆ ಕಷ್ಟಗಳು ಧೈರ್ಯವ ಬಿಡದಿರಲು ಬೇಕೈ ॥
ಕೆಡುಕುತನವನು ಮಾಡದನ್ಯರಿ ।
ಗೊಡನೆ ಹಿತವನು ಬಯಸಿ ಸಜ್ಜನ ।
ರೊಡನೆ ಕೂಡುತ್ತನವರತ ನೀವ್ ಸುಖಿಸಿರೆಂದೊರೆವ ॥ ೨೮ ॥

ಆಡಬೇಡಿರಿ ಪರರ ನಿಂದೆಯ ।
ಮಾಡಬೇಡಿರಿ ಪರವು ಲೋಭವ ।
ಕೂಡಬೇಡಿರಿ ದುರ್ಜನರ ಬಳಿಯೊಳಗದೆಂದೆಂದು ॥
ದೂಡಬೇಡಿರನಾಥ ಜನರನು ।
ಹೂಡಬೇಡಿರಿ ಗ್ರಾಮಕಲಹವ ।
ಬೇಡಬಂದವರಿಂಗೆ ನಾಸ್ತಿಯದೆನಲಿಬೇಡೆನುವ ॥ ೨೯ ॥

ಬಂದವರಿಗುಪಚರಿಸುವದು ಸಂ ।
ಬಂಧಿಗಳ ಪ್ರೇಮನು ಬಳಸುವ ।
ದೆಂದಿಗಾದಡು ಧರ್ಮದಿಂದಾಚರಿಸುವುದು ಲೇಸು ॥
ಕುಂದುಗಳನಾರೈದು ಕೂಡಿದ ।
ಮಂದಿಯೊಳು ಮಾತಾಡುವದು ನಿಮ ।
ಗೆಂದಿಗೀಗುಣಗಳೆ ಸುಭೂಷಣವೆನಿಪವೆಂದೊರೆವ ॥ ೩೦ ॥

ತಾಮರಸನಿಭ ಸಿದ್ಧ ಶರಣನ ।
ರಾಮಣೀಯಕಮಾದ ಯಶವದು ।
ಭೂಮಿಯೊಳುತಾ ಪಸರಿಸುತಲಿರೆ ದಿನದಿನಂಗಳೊಳು ॥
ಈ ಮಹಾವಾರ್ತೆಯನು ಕೇಳುತ ।
ಲಾ ಮಹಾ ಮಲ್ಲಪ್ಪ ತಾತನು ।
ಪ್ರೇಮಪೊಂದುತ ಮನದೊಳಗೆ ಮುದಗೊಂಡು ಇರುತಿರಲು ॥೨೦॥

ತನ್ನ ಜಠರದಿ ಜನಿಸಿದಂಥಾ ।
ತನಯರುನ್ನತ ಸ್ಥಿತಿಗೆ ಬರುತಲಿ ।
ಜನರೊಳಗೆ ಬಹುಖ್ಯಾತಿ ಪಡೆದತಿ ಕೀರ್ತಿಯುತರಿಂಗೆ ॥
ತನ್ನ ಬನದೊಳು ನಟ್ಟಕುಜಗಳು ।
ತನಿರಸದಿ ಬಾಯ್ಗಿನಿದು ಕೊಡುತಿರೆ ।
ತನಗುಡಿಗೆ ಬಹುಜನರು ನಡಕೊಳೆ ತೋಷವಲ್ಲೇನು ॥೨೧॥

ಇದರಪರಿಯಲಿ ತನ್ನ ಶಿಷ್ಯನು ।
ಮದನಮದಹರ ಕೋರಿಸಿದ್ಧಗೆ ।
ಮುದದಿ ಬಹುಜನ ನಮಿಸಿ ಪ್ರಾರ್ಥನೆಗೈದು ಕೊಂಡಾಡೆ ॥
ಇದನು ಕೇಳ್ದು ಸುಮಲ್ಲಪಾಖ್ಯನು ।
ಸದನಕಾಳಂಡಿಕೆಯ ಬಿಡುತಲಿ ।
ವಿದಿತಸಿದ್ಧನ ಕಾಣಲೋಸುಗ ನಡೆದ ನಾಲ್ವಾರಕೆ ॥೨೨॥

ಬಂದು ತೋಷದಿವರಪುರಕೆ ತಾಂ ।
ನಿಂದು ನೋಡಿದ ಮಠದವಳಬದಿ ।
ಕಂಡ ಶ್ರೀಗುರು ಕೋರಿಸಿದ್ಧನು ಕಾಣದಿರುತಿರಲು ॥
ಅಂದು ಕೇಳಿದ ಅಲ್ಲಿವಾಸಿಪ ।
ಮಂದಿಗಳ ಮಲ್ಲಾಖ್ಯ ಗುರುವರ ।
ರಂದರೂರೊಳಗಿಹರು ನೀಲಾಂಬಿಕೆಯ ಸದನದಲಿ ॥೨೪॥

ಕೇಳಿದನು ಅವರಾಡಿದಾ ನುಡಿ ।
ಹೇಳಿದನು ನೀವ್ ಪೋಗಿ ತೀವ್ರದಿ ।
ಬಾಲಸಿದ್ಧನ ಕರೆದು ತರುವದು ಯೆನಲು ದೂತರುಗಳ್
ಶಾಳಿಪಯಣವ ಭರದಿ ಬರುತಂ ।
ಬಾಲೆ ನೀಲಮ್ಮನ ಸುಸದನಕೆ ।
ಪೇಳಿದರ್ಮಠದೊಳಗೆ ಯಾರೋ ಯತಿಗಳ್ ಕರೆಯುವರು ॥ ೩೫ ॥

ಸೊಲ್ಲು ಕೇಳುತ ಭಕ್ತರಾಡಿದ ।
ನಲ್ಲೆ ನೀಲಾಂಬಿಕೆಯು ಪೇಳಿದ ।
ಳಿಲ್ಲಿ ಗುರುವರರೀಗ ಶಿವಪೂಜೆಯೊಳು ಕುಳಿತಿಹರು ॥
ಇಲ್ಲಿರದೆ ಸಾಗುತಲಿ ಅವರಿಗೆ ।
ಯೆಲ್ಲ ಸಂಗತಿ ತಿಳಿಯ ಪೇಳೆನೆ ।
ಸಲ್ಲಲಿತ ಮಲ್ಲಾಖ್ಯನಿಗೆ ಬಂದಿಡನು ಅರುಹಿದರು ॥ ೩೬ ॥

ಚರರು ಪೇಳಿದ ಪರಿಯುಸೆಲ್ಲವ ।
ವರಮಹಾ ಮಲ್ಲಾಖ್ಯ ತಾತನು ।
ಅರಿದು ವಿವರವ ವಿಶಸವಾನುತ ಮತ್ತೆ ಪೇಳಿದನು ॥
ಮರಳಿ ಪೋಗಿರಿ ನಿಮ್ಮ ಗುರುಗಳು ।
ತೆರಳುವರು ಭರಬಪುರ್ದೆನುತಂ ।
ಕರೆದು ತರುವುದುಯೆಂದು ಕಟ್ಟಪ್ಪಣೆಯ ಮಾಡಿದರು ॥ ೩೭ ॥

ಅವಸರದಿ ಚರರಾಗ ಗಮಿಸುತ ।
ಯುವತಿ ನೀಲಾಂಬಿಕೆಯ ಸದನಕೆ ।
ಸವಿಸುವಚನದಿ ಪೇಳಿದರು ಗುರು ನುಡಿದ ಸಂಗತಿಯ ॥
ಭವನ ಪೂಜೆಯೊಳ್ಸಿದ್ಧನಾಲಿಸಿ ।
ತವಕದಲಿ ಶಿವಪೂಜೆ ತ್ಯಜಿಸುತ ।
ಜವದಿ ಬಂದನು ಗುರುವರನ ಕಾಣುವದಕತಿ ನಲವಿಂ ॥ ೩೮ ॥

ಬಂದು ಗುರುಪದಕೆರಗಿ ಸಿದ್ಧನು ।
ಎಂದ ಸ್ವಾಮಿಯೇ ನಿಮ್ಮದರ್ಶನ ।
ದಿಂದ ಧನ್ಯನುವಾದೆ ನಾನೆಂದೆನುತ ದೈನ್ಯದೊಳು ॥
ಮುಂದೆ ನಿಂದಿಹ ಶಿಷ್ಯನೊಳ್ ಯತಿ ।
ವೃಂದಪತಿ ಮಲ್ಲಾಖ್ಯ ನುಡಿದನು ।
ಚಂದದಿಂದಲಿ ನೀನಿರೆಂದುಂ ಹರಸಿದನು ದಯದಿ ॥ ೩೯ ॥

ಕಂದ ಶ್ರೀಗುರು ಕೋರಿಸಿದ್ಧನು ।
ಚಂದದಿಂದಲಿ ಸನ್ನಿಧಿಯ ಸೇ ।
ರ್ದುಂ ದಯಾನಿಧಿದೇವ ಜಡಲೌಕಿಕದಿ ಬಾಳುವೆನು ॥
ಇಂದು ಸುಶಿವಾದ್ವೈತ ತತ್ವವ ।
ಬಂಧುರದೆ ಬೋಧಿಸುತೆ ಯೆನ್ನನು ।
ಕಂದುಗೊರಳನ ಸನ್ನಿಧಿಗೆ ಗಮಿಪಂತೆ ಗೈಯುವದು ॥ ೪೦ ॥

ಅವನ ವಚನವ ಕೇಳಿಕರುಣಾ ।
ರ್ಣವನು ತಾನಾಗಿರುವ ಕತದಿಂ ।
ಶಿವನಿರೂಪವನೊಲಿದು ಹೇಳುವೆ ಕೇಳು ನೀನೆಂದಂ ॥
ಅವನಿಯೊಳು ಸಕಲರಿಗು ಸದ್ಧ ।
ರ್ಮವು ಸಮರ್ಪಕವಾಗಿರಲು ಬೇ ।
ಕವಗುಣಗಳನು ಕಳೆದು ಸದ್ಗುಣವಂತರಾಗಿಹುದು ॥ ೪೧ ॥

ಮಂದಮನುಜರು ಸುಗುಣಗಳತಾ ।
ವೆಂದು ಪೊಂದರು ಬಲ್ಲಜನಕವ ।
ನೆಂದು ಪೊಂದದೆ ಬಿಡರು ಗುಣಗಳೆ ಭೂಷಣಗಳೆನಿಕುಂ ॥
ಸಾದಗುಣದಿ ಸದಾಚರಣೆಯುದ ।
ರಿಂದ ಚಿತ್ತದ ಶುದ್ಧಿಮೇಣದ ।
ರಿಂದ ಸದ್ಗುರು ದಯೆಯು ಕ್ರಮದಿಂದೊದಗುವವು ಬಗೆಯೆ ॥ ೪೨ ॥

ಗುರುಕೃಪಾ ಬಲದಿಂದ ಶಾಸ್ತ್ರದ ।
ತಿರುಳು ತಿಳಿವುದು ತಿಳಿಯುವುದರಿಂ ।
ದರಿವು ಮರೆವೆಗಳಿಲ್ಲದ ಪರಂಜ್ಯೋತಿಯಾನೆಂಬ ॥
ಸಿರಿಯ ಜ್ಞಾನದ ಸಿದ್ಧಿಯುದರಿಂ ।
ದುರುತರದ ಕೈವಲ್ಯ ಸೌಖ್ಯವು ।
ದೊರೆವುದೈ ಶಿವತತ್ವದಿಂದಲಿ ಯೆಂದನಾಚಾರ್ಯ ॥ ೪೩ ॥

ಈ ತೆರದ ವೇದಾಂತ ಪಥದಿಂ ।
ದೋತು ಶಿವಸಿದ್ಧಾಂತವದು ಪ್ರ ।
ಖ್ಯಾತವೆನಿಪುದು ಕೇಳುನೀಂವೊಲಿದು ಪೇಳುವೆನು ॥
ಭೂತಗಳು ಆತುಮರು ಸಲೆ ಸಂ ।
ಜಾತರಾಗದ ಮುನ್ನವೊಂದತಿ ।
ಪೂತವಸ್ತುವು ನಾಮರೂಪುಗಳಿಲ್ಲದೊಪ್ಪಿದುದು ॥ ೪೪ ॥

ಅದುವೆ ಸಚ್ಚಿತ್ಸುಖವೆನಿಪುದ ।
ತ್ಯಧಿಕ ತತ್ವವದೆನಿಕುಷಟ್ತ್ರಿಂ ।
ಶದಸುಸಂಖ್ಯೆಯ ತತ್ವಗಳಿಗತ್ತತ್ತ ತಾನಿಹುದು ॥
ಪುದಿದು ಸಕಲಾಧಾರವೆನಿಪುದು ।
ಬುಧರರಿಯೆ ನಿರ್ವಿಕೃತಿಯಾಗಿಹು ।
ದದು ತನಗೆ ತಾನಿರುವುದಾಧಾರದ ಸ್ವರೂಪದೊಳು ॥ ೪೫ ॥

ಈ ತೆರದ ತತ್ವಕ್ಕೆ ಶಿವನೆಂ ।
ದೋತು ಪೆಸರಿಹುದದರೊಳಗೆ ವಿ ।
ಖ್ಯಾತ ಚಿಚ್ಛಕ್ತಿಯು ಬೆರೆಯುತ ವಿಭೇದದಿಂದಿಹುದು ॥
ಜಾತಕಮಲದೆ ಪರಿಮಳವು ಸಂ ।
ಪೂತ ಸುಧೆಯೊಳು ಸವಿಯಿರುತ್ತಿಹ ।
ರೀತಿಯೊಳು ತಾನಿಹುದೆನುತ್ತುಸುರುವವು ಶಾಸ್ತ್ರಗಳು ॥ ೪೬ ॥

ಮೆರೆವ ಶಿವಚೈತನ್ಯದೊಳಗೊ ।
ಪ್ಪಿರುವ ಚಿಚ್ಛಕ್ತಿಯು ಬೆರೆದು ಬೇ ।
ರಿಯಲಿಲ್ಲದರಿಂದ ಲೋಕವೆನಿಪ್ಪ ಶೃತಿಯುಂಟು ॥
ಮರಳಿ ಶುದ್ಧಾಶುದ್ಧ ರೂಪವ ।
ಧರಿಸುತಲಿ ಶಕ್ತಿಯದು ವಹ್ನಿಯೊ ।
ಳುರಿಹೊಗೆಗಳಂತೆರಡು ವಿಧದಿಂ ತೋರಿತೇನೆಂಬೆ ॥ ೪೭ ॥

ಪೊಸತಿದೇನೆಂತೆಂದು ನಿನ್ನೊಳು ।
ವ್ಯಸನವಂಕುರಿಸದ ತೆರದಿ ನಾ ।
ನುಸುರುವೆನು ಮುನ್ನದರ ವಿವರವ ಕೇಳು ಸಿದ್ಧೇಶ ॥
ಅಸಮ ಶುದ್ಧವೆ ವಿದ್ಯೆಯೆನಿಪುದು ।
ರಸೆಗಶುದ್ಧವ ವಿದ್ಯೆಯೆನಿಸುವ ।
ದೆಸೆವ ವಿದ್ಯೆಯೆ ಮುಕ್ತಿಮೂಲವ ವಿದ್ಯೆಬಂಧಕವು ॥ ೪೮ ॥

ಬಳಿಕ ವಿದ್ಯೆಯು ಮಾಯೆಯೆನಿಪುದು ।
ತಿಳಿಯೆಮತ್ತದು ಪ್ರಕೃತಿಯಾಗಿಹು ।
ದಿಳೆಜಲಾನಲ ವಾಯುಗಗನಗಳನ್ನು ಪಡೆದಿಹುದು ॥
ಬಳಸದೊಂದರೊಳೊಂದು ಭೂತಗ ।
ಳೊಳಗೆ ಭೌತಿಕ ತನುಗಳಾಗಿಹ ।
ವಳವೆ ಪೇಳಲು ಸೃಷ್ಟಿವೈಚಿತ್ರವನು ಬುಧಜನಕೆ ॥ ೪೯ ॥

ಇರುವ ವಿದ್ಯಾಲೇಶ ಸಂಬಂ ।
ಧರುಗಳಾಜೀವರು ಶರೀರವ ।
ಧರಿಸಿಮರವೆಯು ಪೊಂದಿನಾನಾ ಕರ್ಮಗಳ ಮಾಡಿ ॥
ಭರದಿ ಭವರಾಟಳದಿ ನಿಲ್ಲದೆ ।
ತಿರುಗುತಿಪ್ಪರು ಗಾಳಿಯೊಳು ಸಂ ।
ದಿರುವರವದಿಯ ತೆರದಿ ವಿಶ್ರಮಿಸದಲೆ ಸಂತತವು ॥ ೫೦ ॥

ಶುದ್ಧಶಕ್ತಿ ಕ್ಷೋಭದಿಂ ಮೊದ ।
ಲಿದ್ದ ಶಿವತತ್ವವದು ನೆರೆಸಂ ।
ಬುದ್ಧಲಿಂಗವದಾಗಿ ಮತ್ತದಕಂಗವೆಂದಾಯ್ತು ॥
ಬುದ್ಧಿವಂತನೆ ವುಭಯ ರೂಪವ ।
ಹೊದ್ದಿರಲು ಶಿವತತ್ವವದರೊಳ ।
ಗಿದ್ದ ಶಕ್ತಿಯು ಭಕ್ತಿಯೆಂದಿತ್ತೆರದಿ ಶೋಭಿಸಿತು ॥ ೫೧ ॥

ಅಂಗದಾಶ್ರಿತವಾಯ್ತು ಭಕ್ತಿಯು ।
ಲಿಂಗದಾಶ್ರಿತವಾಯ್ತು ಶಕ್ತಿಯು ।
ಲಿಂಗಮೂದೆರನಂಗ ಮೂದೆರನಾದುದೆಂತೆನಲು ॥
ಅಂಗವಾಕಾರಣ ನೆರೆಯೋ ।
ಗಾಂಗವೆನಿಸಿತು ಸೂಕ್ಷ್ಮದಲಿ ಭೋ ।
ಗಾಂಗವೆನಿಸಿತು ಸ್ಥೂಲದಿಂ ತ್ಯಾಗಾಂಗವೆನಿಸಿತ್ತು ॥ ೫೨ ॥

ಯೋಗದಂಗದಿ ಭಾವಲಿಂಗವು ।
ಭೋಗದಂಗದಿ ಪ್ರಾಣಲಿಂಗವು ।
ತ್ಯಾಗದಂಗದೊಳಿಷ್ಟಲಿಂಗವದೆನಿಸಿ ಮೆರೆದಿತ್ತು ॥
ಈಗ ಮುಂದಿನ ಪರಿಯ ಪೇಳುವೆ ।
ರಾಗದಿಂ ಕೇಳುವುದು ಶಿಷ್ಯನೆ ।
ಯೋಗಮೊದಲಾದಂಗ ಮೂರರೊಳೆರಡೆರಡು ಸ್ಥಲವ ॥ ೫೩ ॥

ಸ್ಥೂಲದೊಳು ಭಕ್ತನು ಮಹೇಶನು ।
ಮೇಲೆ ಸೂಕ್ಷ್ಮದೊಳುಂ ಪ್ರಸಾದಿಯು ।
ಲೀಲೆಯಿಂದಲಿ ಪ್ರಾಣಲಿಂಗಿಯು ಕಾರಣದೊಳಿನ್ನು ॥
ಆಲಿಸೈಶರಣನು ಸದ್ವೈಕ್ಯನು ।
ಆಲಸಿತ ಷಟ್‌ಸ್ಥಲಗಳಿವರೊಳು ।
ಕೀಲಿಸಿದ ಷಡ್ಲಿಂಗಗಳನರಿವಂತೆ ಪೇಳುವೆನು ॥ ೫೪ ॥

ಸ್ಥಲಗಳಾರಂಗಗಳೊಳಲಸದೆ ।
ನೆಲಸಿರುವ ಲಿಂಗಂಗಳಾರವು ।
ಸಲುವದಾಚರಣಾದಿ ಲಿಂಗವು ಮತ್ತೆ ಗುರುಲಿಂಗ ॥
ಸುಲಲಿತದ ಶಿವಲಿಂಗವದು ಮೇ ।
ಲಲಘು ಜಂಗಮ ಲಿಂಗವುಂ ಮೇ ।
ಣ್ಸಲೆ ಪ್ರಸಾದದ ಲಿಂಗವುಂ ಮಾಲಿಂಗವಿಂತಿಹವು ॥ ೫೩ ॥

ಆರು ಲಿಂಗಗಳೆನಿಸಲವರೊಳ ।
ಗಾರು ವಿಧಶಕ್ತಿಗಳು ತೋರಿದ ।
ವಾರೆನಿಪ್ಪಂಗಗಳೊಳಾರುಂ ಭಕ್ತಿಗಳು ಮೆರೆಯೆ ॥
ವೀರಶಾಲಿಂಗಾಂಗಳೊಳಗುರೆ ।
ಸೇರಿರುತ್ತಿಹ ಶಕ್ತಿಭಕ್ತಿಗ ।
ಳಾರನರಿದರ್ಪಿಸುವದೇನೆಸೆ ಕೇಳು ಪೇಳುವೆನು ॥ ೫೬ ॥

ಅಂಗಗಳ ಸ್ಥಲವಾರಕೊಪ್ಪುವ ।
ಲಿಂಗಗಳು ಕ್ರಮವಾಗಿ ತಾವವು ।
ತುಂಗಶಬ್ದಸ್ಪರ್ಶರೂಪ ರಸಂಗಳಂ ಮತ್ತೆ ॥
ಹಿಂಗದಲೆ ಗಂಧವನು ತೃಪ್ತಿಯ ।
ಸಾಂಗದಿಂ ಗ್ರಹಿಸುತ್ತಲಿರುತಿಪ ।
ವಂಗಭೋಗವದೆಲ್ಲ ಲಿಂಗದ ಭೋಗವರಿದವಗೆ ॥ ೫೭ ॥

ಅಂಗವೆನಿಸುವ ಜೀವನುಂ ತ ।
ಲ್ಲಿಂಗವೆನಿಸುವ ಶಿವನುಮದರಿಂ ।
ದಂಗಗುಣಗಳೆ ಜೀವಗುಣಗಳು ಲಿಂಗಕಿಲ್ಲವವು ॥
ಅಂಗದಾ ಕ್ರಿಯೆ ಜಡವೆನಿಸುವುದು ।
ಲಿಂಗದಾಕ್ರಿಯೆ ಅಜಡವೆನಿಸುವ ।
ದಂಗಗುಣಗಳ ನೀಗಿ ಲಿಂಗಿಗಳಿಹರು ಲೋಕದೊಳು ॥ ೫೮ ॥

ಸಮಯಕೊದಗಿದ ಸತ್ಪದಾರ್ಥವ ।
ನಮಳಲಿಂಗಕೆ ಕೊಟ್ಟು ಸವಿಯುತ ।
ಶಮತಮಗೆ ಸುಖಿಸುವರು ವೀರಶಿವಾಚರಣೆಯುತರು ॥
ಭ್ರಮಿಸರೀ ಲೋಕದಲಿ ಭೋಗದೊ ।
ಳಮಿತ ಪರಲೋಕದ ಸುಖಗಳೊಳು ।
ಶಮದಮಾದಿಗಳಿಂದ ಶಾಂಭವ ವಿದ್ಯೆಯಿಂದಿಹರು ॥ ೫೯ ॥

ಆರು ಲಿಂಗಸ್ಥಲಗಳುಂ ಮ ।
ತ್ತಾರುಸಲೆಯಂಗಸ್ಥಲಗಳುಂ ।
ಸೇರಿಸಮ್ಮಿಶ್ರದೊಳು ಮುವತ್ತಾರೆನಿಸುತಿಹವು ।
ಸಾರಮಿಶ್ರದೊಳಾಗೆ ಮಿಶ್ರವು ।
ತೋರುತಿಹವಿನ್ನೂರು ಪದಿನಾ ।
ರ್ವೀರರೀತೀ ಸ್ಥಲವಿಭೇದವನರಿದು ಚರಿಸುವದು ॥ ೬೦ ॥

ಅರಿವುದಾಚರಿಸುವುದೆನಿಪ್ಪರ ।
ಡರಿಯೆ ಜ್ಞಾನಕ್ರಿಯೆಗಳೆನಿಪವು ।
ಪರಮ ವೀರಾಂಶಿಕಗೆ ಜ್ಞಾನಕ್ರಿಯಗಳೇ ಬೇಕು ॥
ಅರಿವಿಗುಚಿತವದಾಚರಣೆಯಾ ।
ಚರಣೆಗುಚಿತವದರಿವು ಮೇಣೀ ।
ಪರಿಯು ಮುಕ್ತಿಗೆ ಸಾಧನವು ಬಾಧಕನೆನಿಸದೆಂದು ॥ ೬೧ ॥

ಕಣ್ಣುಕಾಲುಗಳೆರಡಿರಲು ನರ ।
ನಿನ್ನು ಸಂಸಾರದೊಳು ಸುಖಿಸುವ ।
ಚೆನ್ನ ಹಕ್ಕಿಯುದೆರಡು ಪಕ್ಕಗಳಿಂದ ಹಾರುವದು ॥
ರನ್ನವಸಿರೊಳು ವೀರಶೈವರಿ ।
ಗುನ್ನತದ ಜ್ಞಾನಕ್ರಿಯೆಗಳವು ।
ಮನ್ನಿಸಲು ತಕ್ಕವುಗಳಾಗಿಹವೆಂದು ತಿಳಿಯುವದು ॥ ೬೨ ॥

ಆಲಿಸೈ ಮತ್ತಿನ್ನು ಭಕ್ತನು ।
ಶೀಲದಿಂದಾಚರಿಸುವುದನು ವಿ ।
ಶಾಲಮತಿಯಿಂ ತಾನು ಧರಿಸಿದ ಲಿಂಗವಂ ದಿನವು ॥
ಕಾಲವರಿದರ್ಚಿಸುತಲನಿತರ ।
ಮೇಲೆ ಗುರುಸೇವೆಯನು ಮಾಡುತ ।
ಶೂಲಿಸಮ ಜಂಗಮದ ತೃಪ್ತಿಯ ಬಿಡದಲೆಸಗುವದು ॥೭೧॥

ಭೂತಿರುದ್ರಾಕ್ಷಿಗಳ ಮಹಿಮೆಯ ।
ಸಾತಿಶಯದಿಂದರಿದು ಧರಿಸುತ ।
ಪೂತಪಂಚಾಕ್ಷರ ಸುಮಂತ್ರವ ಮನದಿ ಜಪಿಸುತ್ತ ॥
ವೋತು ಹರಗುರು ಪರಮಚರ ಸಂ ।
ಜಾತಪದವಾರಿಯ ಪ್ರಸಾದವ ।
ಪ್ರೀತಿಯಿಂ ಸ್ವೀಕರಿಸಿ ಆದ್ಯರ ಪಥದಿ ಬಾಳುವದು ॥೭೨॥

ಕೆಲರು ಗುರುವಂ ಕೆಲರು ಹರನಂ ।
ಕೆಲರು ಚರರಂ ಕೆಲರು ಭೂತಿಯ ।
ಕೆಲರು ರುದ್ರಾಕ್ಷಿಗಳ ಕೆಲವರು ಶೈವಮಂತ್ರವನು ॥
ಕೆಲರು ಪದಜಲವಂ ಪ್ರಸಾದವ ।
ನಲಸದಲೆ ನೆರೆನಂಬಿಯದರಿಂ ।
ಸಲುವ ಶಿವಪದವಿಯನು ಪೊಂದಿದ ಕಥೆಗಳೊಪ್ಪಿಹವು ॥೭೩॥

ಗುರುವಿನೊಲುಮೆಯ ದೊರಕಿಸಲು ತಾ ।
ಪರಮ ಭಕ್ತಿಯೊಳವನ ಸೇವಿಸಿ ।
ಗುರುವೆ ಶಿವನೆಂದಾತನಾಜ್ಞೆಯೊಳಾಚರಿಸುತಿಹುದು ॥
ನೆರೆಮಲತ್ರಯಗಳನು ಕಳೆದುರು ।
ತರದಿ ನಿರ್ಮಲಚಿತ್ತನೆನಿಸುತ ।
ಲರಿದು ಲಿಂಗಾಂಗಗಳ ಸಮರಸವನು ಸುಖಿಸಲಹುದು ॥೭೪॥

ಕೋಹಮೆಂಬ ವಿಚಾರದಿಂ ಮೇ ।
ಣ್ಣಾಹಮೆಂಬ ವಿವೇಕದಿಂ ನೆರೆ ।
ಸೋಹಮೆಂಬಭಿಮಾನದಿಂ ಮೇಲೆನಿಪುದಿನ್ನೊಂದು ॥
ಬೇಹುದೇನೆನಲುಸುರುವೆನು ದಾ ।
ಸೋಹಮೆಂಬುದು ಶಿವನ ಕೂಡಿಪು ।
ದೀ ಹದನವರಿದಾಚರಿಸುವರೆ ಸದುಭಕುತರಹರು ॥ ೭೫ ॥

ಕಿಂಕರತ್ವದೊಳಿರುವ ಮನುಜನು ।
ಶಂಕರನೆ ತಾನಾಗುತಿರುವನು ।
ಶಂಕಿಸುವ ಮಾತಲ್ಲವೀ ನುಡಿ ಲೋಕದೊಳಗಿಹುದು ॥
ಬಿಂಕವಿಲ್ಲದೆ ಹರಶರಣರೊಳು ।
ಲೆಂಕನಾಗುತ ಸೇವಿಸುತ್ತಿರೆ ।
ಸಂಕಲಿತದಾಸೋಹವೆಂಬುವ ಭಾವವೆನಿಸಿಹುದು ॥ ೭೬ ॥

ನಿಗಮ ತಂತ್ರಗಳಮಿತ ಸಾರವ ।
ಬಗೆದು ಪೇಳಿದೆನಿದನರಿದು ಸಂ ।
ದೆಗವ ಬಿಟ್ಟಾಚರಿಸು ಸಿದ್ಧನೆ ಭಕ್ತಿಯಿಂತೆಂದ ॥
ಸೊಗಸಿನಿಂ ಬಾಳುತ್ತ ಶಿವಸುಖ ।
ದೊಗುಮಿಗೆಯೊಳಿಹುದನವರತವೆಂ ।
ದಗಜೆಯರಸನ ನೆನೆದು ಮೌನದೊಳಿದ್ದ ಗುರುರಾಯ ॥ ೭೭ ॥

ಇಂತು ಬಗೆಬಗೆಯಿಂದ ಪೇಳಲು ।
ಸಂತಸದೊಳಾಳುತಲಿ ಶಿಷ್ಯನು ।
ಕಂತುಹರನಪರಾವತಾರನ ಶಾಂತಗುರುವರನ ॥
ಚಿಂತೆಯಳಿದಭಿವಂದಿಸುತ್ತಲ ।
ನಂತ ವಿಧದಿಂ ನುತಿಸುತಲಿ ನಿ ।
ಶ್ಚಿಂತೆ ಸುಖಬೋಧೆಯನು ಮಾಡುವರಾರೆನುತ್ತಿಹನು ॥ ೭೮ ॥

ನಿಮ್ಮ ವಚನವ ಕೇಳಿದುದರಿಂ ।
ದೆಮ್ಮ ಪೂರ್ವದ ಕರ್ಮವಳಿದುದು ।
ಸಮ್ಮತವಾದಾಯ್ತಂತರಂಗಕೆ ಶುದ್ಧನೆನಿಸಿದೆನು ॥
ಹಮ್ಮು ಬಿಮ್ಮುಗಳನ್ನು ತೊರೆಯುತ ।
ನೆಮ್ಮಿ ಸುಖದಲ್ಲಿಹೆನು ಯೆನುತಲಿ ।
ಸಮ್ಮುದದಿ ಗುರುವಿಂಗೆ ವಂದಿಸಿದಂ ಸುಭಕ್ತಿಯೊಳು ॥ ೬೯ ॥

ಗುರು ಮಹಿಮ ಮಲ್ಲಪ್ಪ ತಾತನು ।
ತರುಳಸಿದ್ಧನ ಇಷ್ಟವನು ತಾ ।
ಕರುಣಿಸುತ ನಡೆತಂದು ಕಾಕಂಡಿಕೆಯ ಮಠದೊಳಗೆ ॥
ಇರುತ ಹರಪೂಜಾನುಭವ ಸ ।
ದ್ವಿರತಿ ವೈಭವಗಳಲಿ ಮೆರೆದನು ।
ಪರಿಪರಿಯೊಳಾಪುರದ ಭಕ್ತರ ಸೇವೆಯಂ ಕೊಳುತ ॥ ೭೦ ॥

ಪರಮತರದೀ ಯತಿಪುರಾಣವ ।
ನುರುಮುದದೊಳೋದುವರಿಗಂ ಪೇ ।
ಳ್ವರಿಗೆ ಆಲಿಸುವರಿಗೆ ಸದ್ಗುರು ಕೋರಿಸಿದ್ಧೇಶಂ ॥
ಚಿರತರಾಯುರರೋಗ್ಯವೈಸಿರಿ ।
ಪರಮವಿದ್ಯೆ ಸುಭಕ್ತಿಮೊದಲಾ ।
ಗಿರುವ ಸತ್ಫಲಗಳನು ಕರುಣಿಸುತಿರ್ಪ ನಿದುದಿಟವು ॥ ೭೧ ॥

ಅಂತು ಸಂಧಿ ಎಂಟಕ್ಕಂ ಪದನು ೩೭೭ ಕ್ಕಂ ಮಂಗಲಂ ಮಹಾ

ಶ್ರೀ ಶ್ರೀ ಶ್ರೀ

॥ ಶ್ರೀಗುರು ಕೋರಿ ಸಿದ್ಧೇಶ್ವರಾಯನಮಃ ॥



## ಒಂಭತ್ತನೆಯ ಸಂಧಿ

ಸೂಚನೆ— ಗುರುವಿನಾಜ್ಞೆಯ ತಂದಿ ಸಿದ್ಧನು ।
ತೆರಳಿ ಕಾಕಂಡಿಕೆಯ ಪುರಕಂ ।
ಧರಿಸಿ ಗುರುವಿನ ಪಟ್ಟವಧಿಕಾರದೊಳು ಶೋಭಿಸಿದ ॥

ಶ್ರೀಮದಮಲಾನಂದ ರೂಪನು ।
ಸಾಮಮುಖ ನಿಗಮೋಕ್ತಿ ವಿನುತನು ।
ಕೋಮಲಪದಾನತಸುಖಪ್ರದನತುಲ ಗುಣಯುತನು ॥
ಕಾಮಮುಖ ರಿಪುವರ್ಗದೂರನು ।
ಭೂಮಹಿತ ಕೀರ್ತಿಪ್ರತಾನನು ।
ಪ್ರೇಮರಸಭರಭರಿತ ಗುರುವರ ಸಿದ್ಧ ಕರುಣಿಪುದು ॥ ೧ ॥

ನಡೆದು ಗುರುವರ ಪೋಗಲಿತ್ತಲ್ ।
ಮೃಡನಸಮ ಶ್ರೀ ಕೋರಿ ಸಿದ್ಧನು ।
ನಡೆಸಿದನು ಶುಭಚರ್ಚೆ ಕೆಲದಿನ ಜರುಗಿಪೋಗಲ್ಕೆ ॥
ವಡನೆವುತ್ತಮ ಶಿಷ್ಯ ಜನರಾ ।
ಗಡಣವನು ತಾ ಕೂಡಿಕೊಳುತಲಿ ।
ನಡೆದನೈ ಗುರುವಚನದೊಲು ಕಾಕಂಡಿಕಿಯ ಪುರಕೆ ॥ ೨ ॥

ಗುರುವರನು ಶ್ರೀ ಶಾಲಿವಾಹನ ।
ವರಶಕವು ಪದಿನೇಳು ಶತಮೇ ।
ಲಿರುವ ಐವತ್ತೈದು ಭಾವಸುನಾಮ ವತ್ಸರದಿ ॥
ವರಸುಮಾಘದ ಬಹುಳ ಪಂಚಮಿ ।
ಬೆರೆದ ಗುರುವಾಸರದ ದಿನದೊಳು ।
ಭರದಿ ಬಂದನು ಗುರುವಿನಾ ಸ್ಥಲಕಾಗಿ ಸಿದ್ಧೇಂದ್ರ ॥೩॥

ಬಂದು ನೋಡಿದ ಬಹುವನಪಿನಿಂ ।
ಸುಂದರಾಗಿಹ ಪುರದ ಬಹಿರದಿ ।
ನಿಂದು ಶೋಭಿಪ ವನದ ಸಿರಿಯನ್ನೇನು ಬಣ್ಣಿಸಲಿ ॥
ಅಂದಗೊಂಡಿಹ ಕುಜಲತಾದಿಗ ।
ಳಿಂದ ಬಿನದಿಸಿ ತಂಬೆಲರ ಭರ ।
ದಿಂದ ಪರಸುತ ಜನಮನಕ್ಕಾನಂದ ಕೊಡುತಿಹುದು ॥೪॥

ಇಂತೆಸೆವ ಬನಮಧ್ಯಭಾಗದಿ ।
ಶಾಂತ ಸದ್ಗುರು ಕೋರಿ ಸಿದ್ಧನು ।
ನಿಂತು ನೋಡಿದನೊಂದು ಆಮ್ಲಸುಭೂಜತಟದಲ್ಲಿ ॥
ಕುಂತುಕೊಂಡನು ಸ್ವಸ್ಥಮನದಿ ಸ ।
ಮಂತು ಶಿಷ್ಯವೃಂದವೆರಸುತ ।
ಇಂತಿರಲು ಬಳಿಕಿತ್ತ ಗುರುಮಲ್ಲಪನ ಠಾವಿನಲಿ ॥೫॥

ನೆರೆಸುಮತಿವರ ಶಿಷ್ಯ ಮಂಡಳಿ ।
ಪರಿಕಿಸಲು ಶತಸಪ್ತವಾಧಿಕ ।
ವಿರುತಿಹುದು ಅದರೊಳಗೆ ಪ್ರಮುಖಾ ಶಿಷ್ಯರೆಂದೆನಿಪ ।
ಪರಮತರ ಶಂಕ್ರಪ್ಪ ಯರಗಲ್ ।
ಮೆರೆವ ಸಿಂದಿಗಿ ಪುರದೊಳಿರುತಿಹ ।
ಪರಮ ಜಕ್ಕಪ್ಪಯ್ಯರೆಂಬುವ ಪ್ರಮುಖರಿರುತಿರ್ದರ್ ॥೬॥

ನೋಡಿದನು ಯಿಂತಿಪ್ಪ ಶಿಷ್ಯನ ।
ಕೂಡವಮಾತಾಡಿದನು ಬಲುಮುದ ।
ಗೂಡಿ ತನ್ನಯ ವಡಲದಭಿಮತದಖಿಲ ಸಂಗತಿಯ ॥
ಜೋಡು ಮಾಡುವ ನಮ್ಮ ಅಧಿಕರ ।
ಕೀಡು ಆಗುವ ಭಕ್ತನಾವನು ।
ಆಡಿರೈ ಯಿದಕುತ್ತರವ ನೀವ್ ಬೆದರದಲೆ ಎಂದ ॥ ೭ ॥

ಕೇಳತಲಿ ಗುರುವಚನ ಸರ್ವರು ।
ಪೇಳಲಿಕೆ ಘನತರದ ಧೈರ್ಯವು ।
ಸಾಲದಲೆ ಮೌನತ್ವವನು ತಾವ್ ತಾಳಿಯಿರುತಿರಲು ॥
ಬಾಳದೃಗಸಮ ಮಲ್ಲಪಾಖ್ಯನ ।
ಮೇಲುತರ ಪೀಠಾಧಿಕಾರವ ।
ಮೇಳಗೊಳ್ಳಲು ಭೀತಿಭಾವವ ವಹಿಸಿ ನಿಂದಿಹರು ॥ ೮ ॥

ನೋಟಕತಿ ಆನಂದಗೊಡುತಿಹ ।
ಪೀಠವಂದನು ತರಿಸಿಯಿರಿಸುತ ಲ ।
ಲಾಟ ಲೋಚನನೋಲ್ವ ಗುರು ಮಲ್ಲಾಖ್ಯ ತಾತನು ತಾ ॥
ಘಾಟದಿಂದೊಂದಿಡಿಕಿ ಜೋಳವ ।
ಪೀಠದುಪರಿಯೊಳಿಸೆಯಲಾಕ್ಷಣ ।
ಚಟಚಟಾಯೆಂದರಳುದೋರಲು ನೋಡುತಖಿಲ ಜನ ॥ ೯ ॥

ಬೆರಗುವಡೆದತಿ ಭೀತಿಯಿಂದ ।
ಲ್ಲಿರುವ ಶಿಷ್ಯವೃಂದ ನುಡಿಯಿತು ।
ದೊರಕಿಸಿಕೊಳಲು ಪೀಠವನು ಎಮ್ಮಿಂ ಸಾಧ್ಯವಲ್ಲೆಂದು ॥
ಗುರುವರನು ಮುಗುಳೊಚಿಸಿದನು ತಾ ।
ಇರುವನೆಲ್ಲಿಯು ಕೋರಿ ಸಿದ್ಧನು ।
ತ್ವರದಿ ಕರತಾರೆಂದು ಅಜ್ಞೆಯನಿತ್ತ ಶಿಷ್ಯನಿಗೆ ॥ ೧೦ ॥

ಗುರುಕುಲೇಂದ್ರಂ ಕೋರಿ ಸಿದ್ಧನ ।
ಅರಸುತಲಿ ಅಲ್ಲಲ್ಲಿ ಸ್ಥಲಗಳ ।
ಇರವು ಗಾಣದೆ ತಿರುಗುತಿರಲಾ ವನದ ಮಧ್ಯದಲಿ ॥
ಬರುತ ಕಂಡೊಂದಾವ್ಲ ತರುಕು ।
ತ್ತರದಿ ಕುಳಿತಿಹ ಸಿದ್ಧ ಶರಣನ ।
ಚರಣಕೆರಗುತ ಪೇಳ್ದರೈ ತಾವ್ ಬಂದಸಂಗತಿಯ ॥ ೧೧ ॥

ಸ್ವಾಮಿಗುರು ಮಲ್ಲಾಖ್ಯ ತಾತನು ।
ಪ್ರೇಮದಲಿ ಕರತರುವುದೆಂದೇ ।
ನೇಮವನು ಗೈದೆಮ್ಮನಟ್ಟಿದ ಕೇಳು ಪ್ರಭುವರನೀ ॥
ತಾಮಸವ ಮಾಡದಲೆ ಯತಿನಿಧಿ ।
ಸೋಮ ಅವಸರವೆರಸಿ ಬಾರೈ ।
ಕಾಮದೂರನೆ ಕರುಣನಿಧಿಯಿಂತೆಂದು ನಮಿಸಿದರು ॥ ೧೨ ॥

ಆಲಿಸುತಲಾರಾಧ್ಯರನುಮತಿ ।
ಪಾಲಿಸಲು ಗುರು ಕೋರಿಸಿದ್ಧನು ।
ಮೇಲುಗಂಬಳಿ ಪೊದ್ದು ತನ್ನಯ ಶಿಷ್ಯರೊಡಗೂಡಿ ॥
ಬಾಳತೋಷವನಾಂತು ಹೃದಯದಿ ।
ಕಾಲಕಾಲನ ಧ್ಯಾನಮಗ್ನದಿ ।
ಬಾಲಲೀಲೆಯ ನಟಿಸುತೈದಿದ ಗುರುವಿನಾ ಬಳಿಗೆ ॥ ೧೩ ॥

ಕಾಣುತಲಿ ಗುರುವರನ ಸಿದ್ಧನು ।
ಗೋಣುಮಣಿಯುತ ನಮಿಸಿ ಚರಣಕೆ ।
ಸ್ಥಾಣು ರೂಪನೆ ತಿಳುಹು ಮುಂದಿನ ಕಜ್ಜದಾಬಗೆಯ ॥
ಮಾಣದನುಗೊಳಿಸುವೆನು ಆಜ್ಞೆಗೆ ।
ಕ್ಷೀಣವಿಲ್ಲದ ತೆರದಿ ನಾನುಂ ।
ಪ್ರಾಣಪಂಚಕ ಅರ್ಪಿಸಿರುವೆನು ಯೆನಲು ಸಿದ್ಧೇಂದ್ರ ॥ ೧೪ ॥

ಸಿದ್ಧಪ್ರಭು ಹೀಗೆಂದು ವಚಿಸೆ ಪ್ರ ।
ಸಿದ್ಧಗುರು ಮಲ್ಲಾಖ್ಯ ಪೇಳಿದ ।
ಬುದ್ಧಿವಂತನೆ ಲಾಲಿಸೆನ್ನಾ ಅಧಿಕರಾನ್ವಿತದ ॥
ಗದ್ದುಗೆಯು ನೀಂ ಪಡೆದು ಇಲ್ಲಿರು ।
ತಿದ್ದ ಶಿಷ್ಯರ ಪೊರೆವುದೆಂದೆನೆ ।
ಸಿದ್ಧನುಡಿದನು ನಿಮ್ಮನುಜ್ಞೆಯದಾದರೊಪ್ಪುವದು ॥ ೧೫ ॥

ಇಂತೆನುತ ಶ್ರೀ ಕೋರಿ ಸಿದ್ಧನು ।
ಸಂತಸಂ ತಳೆದಾಗ ಗುರುವರ ।
ಕಾಂತಿಪುಣ್ಯವ ದಿವ್ಯ ಪೀಠದ ಬಳಿಗೆ ಐತಂದು ॥
ಶಾಂತಿಯುತ ಸಿದ್ಧೇಂದ್ರನಿಗೆ ಶುಭ ।
ವಾಂತ ಸಮಯದಿ ಕೂಡ್ರಿಸುತ ತ ।
ನ್ನಂತರಂಗದಿ ಹರನ ಸ್ಮರಿಸುತ ಶಿರದಿ ಕರವೆಳೆದ ॥ ೧೬ ॥

ಹಾಕಿದನು ತನಗ್ರೀವ ತಿರುತಿಹ ।
ನೇಕ ಸೊಬಗಿನ ಕಂಠಮಾಲೆಯು ।
ಶೋಕಹರನಿಗೆ ನಮಿಸಿ ಕಾಣಿಕೆಯಿತ್ತು ಗುರುನುಡಿದ ॥
ನಾಕಪತಿ ನೀನಾಗು ಎನೆಭವ ।
ಭೀಕರನು ಸಿದ್ಧೇಂದ್ರತಾ ಜಗ ।
ದೇಕ ಗುರುಮಲ್ಲಾಖ್ಯನಿಗೆ ಶಿರಬಾಗಿ ನುತಿಸಿದನು ॥ ೧೭ ॥

ಲಿಂಗಸಮ ಶ್ರೀ ಸಿದ್ಧಶರಣಗೆ ।
ತುಂಗತರ ಪಟ್ಟಾಧಿಕಾರವ ।
ಪಿಂಗದಲೆ ವಹಿಸುತ್ತ ಕಾಣಿಕೆಯಿತ್ತರಖಿಲ ಜನ ॥
ಪೊಂಗಿಷಡುರಸ ಪಾಕದಿಂದಲಿ ।
ಸಾಂಗದಿಂ ಭೋಜನವ ನಡೆಸುತ ।
ಪಿಂಗದಲೆ ಮಹಯುತಿಯ ಕೊಂಡಾಡಿದರು ಬಹುವಿಧದಿ ॥ ೧೮ ॥

ನೆರೆದ ಸಪ್ತಶತ್ಯೈಕ ಶಿಷ್ಯರು ।
ಅರಿದಜಕ್ಕಪ್ಪಯ್ಯ ಸಿಂದಿಗಿ ।
ಪರಮತರ ಶಂಕ್ರಪ್ಪ ಯರಗಲ್ ಎಂಬ ಉಭಯಕರು ॥
ಗುರುಮಹಿಮ ಮಲ್ಲಪ್ಪತಾತಗೆ ।
ಯೆರಗಿ ಕರಗಳ ಮುಗಿದು ಕೇಳ್ದರು ।
ವರವನೀವೇಂ ಕೊಡುವಿರ್ಕೈ ನಮಗೆಂದರನುನಯದಿ ॥ ೧೯ ॥

ಕೇಳುತಲಿ ಮಲ್ಲಾಖ್ಯ ತಾತನು ।
ಲೀಲೆಯಿಂ ಬಿಂದಿಗೆಯ ಪಿಡಿಯುತ ।
ಬಾಲಜಕ್ಕಪ್ಪಯ್ಯಗೀಯುತ ಪೂಜಿಸಿದಕೆಂದ ॥
ಶೀಲಮತಿ ಶಂಕ್ರಪ್ಪ ಕುವರಗೆ ।
ಮೇಲುತರವಸನಾಸನೀಯುತ ।
ಲೀಲೆಯಿಂ ನೀನಿದನು ಪೂಜಿಸಿ ಧನ್ಯನಾಗೆಂದ ॥ ೨೦ ॥

ಕೂಡಿದಖಿಳ ಸುಶಿಷ್ಯ ವೃಂದವ ।
ನೋಡಿ ಗುರುಮಲ್ಲಾಖ್ಯತಾತನು ।
ಮಾಡಿದಾಶೀರ್ವಾದ ನೀವ್ಗಳು ನಿರುತ ಸೌಭಾಗ್ಯ ॥
ಕೂಡಿಬಾಳಿರಿ ಈ ಜಗದೊಳುಂ ।
ಜೋಡುಗೊಳ್ಳಿರಿ ಪರವ ಅಂತ್ಯಕೆ ।
ಮಾಡಿರ್ಕೈ ಮೃಡಸ್ಮರಣ ಸತತವು ಯೆಂದನತಿ ಮುದದಿ ॥ ೨೧ ॥

ಭಾಸುರದ ವರಶಿಷ್ಯತತಿ ಸಂ ।
ತೋಷಸಾಗರದೊಳಗೆ ಮುಳುಗುತ ।
ಘೋಷಗೈದರು ವಿವಿಧವಾದ್ಯದ ರಭಸಮೇಲ್ಕೆರೆಯೆ ॥
ಮಿಸುಪಗಂಧಾಕ್ಷತೆಗಳಿಂ ಮಿಗೆ ।
ಲೇಸೆನಿಪ ಅರ್ಚನೆಯ ಗೈಯುತ ।
ಈಶ ಗುರುವಿಗೆ ಬೆಳಗಿದರು ಜಯಮಂಗಳಾರತಿಯ ॥ ೨೨ ॥

ಉತ್ತರಾಯಣದೊಳಗೆ ಮೆರೆಯುವ ।
ಉತ್ತಮೋತ್ತಮ ಮಾಘಮಾಸದಿ ।
ಸ್ತುತ್ಯವಾಗಿಹ ಕೃಷ್ಣಚತುರ್ದಶಿ ಚಂದ್ರವಾಸರದಿ ॥
ಪ್ರತ್ಯಗಾತ್ಮನ ಪೊಳಲ ಯಾತ್ರೆಗೆ ।
ಸತ್ಯಗುರು ಮಲ್ಲಾಖ್ಯ ಸಾಗುತ ।
ನಿತ್ಯಮಂಗಲ ಶಿವನ ತೇಜದಿ ಬೆರೆದು ಐಕ್ಯಾದ ॥ ೨೩ ॥

ಸುರಿದರಾಗಲೆ ಅಲರವರ್ಷವ ।
ಸುರನಿಕರ ಸಹಿತಾಗ ನರರುಂ ।
ಮೊರೆದವವು ದುಂದುಭಿಯು ವಾದ್ಯವು ಧಂಧಣಾ ಎನುತ ॥
ಮರುಗಿದರು ಮಹಶಿಷ್ಯಮಂಡಳ ।
ಗುರುವರನ ಗುಣತತಿಯ ನೆನೆಯುತ ।
ತರುಣಿಮಣಿ ಮಾಳಮ್ಮ ಗೌಡತಿ ಬಳಲಿ ಬಿಸುಸುಯ್ದಳ್ ॥ ೨೪ ॥

ಭವವಿದೂರನ ಪಂಚ ಅಸುಗಳ್ ।
ಶಿವನೊಳಗೆ ಸಲೆವಂದುಗೂಡಲು ।
ಭುವಿಜ ನಿಕರವು ಚಿಂತೆಯಾನುತ ಬಾಗಿನಿಂತಿಹವು ॥
ಪವನ ತನ್ನಯ ಗಮನ ತಡೆದನು ।
ರವಿಯು ಬಿಸಿಯ ಪ್ರಖರವಾರ್ಣ್ದನು ।
ಸುವಿತಧ್ವನಿಗೈಯುದಲೆ ಖಗಗಳು ಸ್ತಬ್ಧವಾಗಿಹವು ॥ ॥ ೨೫ ॥

ಫಾಲದೃಗಸಮ ಗುರುವರಾರ್ಯಗೆ ।
ಮೇಲುತರದ ಸಮಾಧಿ ಕುಟಿರದಿ ।
ಲೀಲೆಯಿಂದಿರಿಸುತಲಿ ನಿಖಿಲರು ಮಂಗಲಂ ಗೈದು ॥
ಪಾಲಿಸೈ ನೀ ನಮಗೆ ಪರಿಭವ ।
ಜಾಲಮಂ ಹರಿಸುತಲಿ ಸಂತತ ।
ಮೇಳಯಿಸು ಇಹಪರದ ಸೌಖ್ಯವನೆಂದು ನಮಿಸಿದರು ॥ ೨೬ ॥

ಇಂತು ಮಿಗೆ ವೈಭವದಿ ಶಿಷ್ಯರು ।
ಕಂತುದೂರನ ಮಂತ್ರಗಾತ್ರವ ।
ಸಂತಸದಿ ಮರೆಗೈದು ಸಲೆಪೂರಾಶಿ ಹರವಿದರು ॥
ಕಾಂತೆಮಣಿ ಮಾಳಮ್ಮ ಗೌಡತಿ ।
ಶಾಂತಭಾವದಿ ಹಣವ ತರಿಸುತ ।
ಎಂತು ಪೇಳಲಿ ದಾನಮಾಡಿದಳಾಗ ಬಹುಜನಕೆ ॥ ೨೭ ॥

ಭರದಿ ಗೋಧುಮರಾಶಿ ಶರ್ಕರ ।
ತರಿಸಿದಳು ಘೃತಶಾಲಿ ಧಾನ್ಯವ ।
ಪರಿಪರಿಯ ಶಾಕಗಳ ಕಾಯ್ಗಳವೆರಸಿಕೊಳುತಾಗ ॥
ಪರಮ ಪಾಕವ ಶಾಸ್ತ್ರವಿಧಿಗನು ।
ಸರಿಸಿ ಮಾಡ್ದರು ಪಾಕರುಚಿಯನು ।
ವೊರೆಯಲಿಕೆ ವಶವಲ್ಲ ಸೌರಭ ಬೀರುತಿರುತಿರಲು ॥ ೨೮ ॥

ಕೂಡುತಗಣಿತ ಜನತತಿಯು ತಾವ್ ।
ಮಾಡಿದರು ಭೋಜನವ ಸಂತಸ ।
ಗೂಡಿಬಹುತೃಪ್ತಿಯನು ಪೊಂದುತ ತೇಗುತಿರೆ ಮುದದಿ ॥
ನೋಡಿ ಸಿದ್ಧನು ಹರುಷಗೊಳುತಿರೆ ।
ಗೌಡತೀ ಮಾಳಮ್ಮ ಸಹಿತಂ ।
ಕೂಡಿದಾ ಸೌಗಂಧ ತಾಂಬೂಲಿತ್ತರ್ ಸರ್ವರಿಗೆ ॥ ೨೯ ॥

ಇಂತು ಮುದವನುಗೊಂಡು ಸರ್ವರು ।
ನಿಂತುಕರವನು ಮುಗಿದು ಸಿದ್ಧಗೆ ।
ಶಾಂತಗುರುಭಕ್ತಿಯ ಮಹತ್ವವ ತಿಳುಹು ನಮಗೆನಲು ॥
ಸಂತಜನಪತಿ ಕೋರಿ ಸಿದ್ಧನು ।
ಕುಂತು ಕೇಳಿರಿ ಭಕ್ತಿ ಘನತೆ ಸ ।
ಮಂತು ಬೋಧಿಪೆಯಿದರೊಲಾಚರಿಸುವುದು ನೀವುಗಳು ॥ ೩೦ ॥

ಕೇಳಿರೈ ಶಿವಭಕುತರೇಸುವಿ ।
ಶಾಲವಹ ಶ್ರೀವೀರಶೈವದ ।
ಮೂಲಮಾರ್ಗದ ಕೀಲನರಿಯಲು ಭಕ್ತನಧಿಕಾರಿ ॥
ಏಳು ಜನ್ಮದ ಪಾಪತಮವಂ ।
ಪಾಳುಗೈಯಲು ದಿನಪನಾಗಿಹ ।
ನೀ ಲಲಿತವರ ನೀತಿಗುಣಗಳ ವ್ರಾತದಿಂ ಮೆರೆವ ॥ ೩೧ ॥

ಭಕ್ತನೇ ಸರ್ವಾಧಿಕಾರಿಯು ।
ಭಕ್ತನೇ ಭವಮರಣ ದೂರನು ।
ಭಕ್ತ ಶಿವಕೈವಾರಿ ಶಿವನುನ್ನತಿಗೆ ಕಾರಣನು ॥
ಭಕ್ತವತ್ಸಲ ಹರನುಮಾತನ ।
ತೃಪ್ತಿಗೈಯುವನೀತನೆಂದಾ ।
ಸಕ್ತನಾಗುತ ಭಕ್ತಬಾಂಧವನೆನಿಸಿಕೊಳ್ಳುವನು ॥ ೩೨ ॥

ಸಾನುಭೂತಿ ಸುಭಕ್ತ ಶ್ರೀಸ್ಮರೆ ।
ಮಾನವಗೆ ಶಿವಭಕ್ತಿಯೇ ಸುಖ ।
ತಾನು ಪೋಗುವ ಮುಕ್ತಿಗೃಹಕೀ ಭಕ್ತಿಸೋಪಾನ ॥
ಸ್ವಾನುಭವದ ಮೂಲ ಮತ್ತಾ ।
ಜ್ಞಾನಕ್ರಿಯೆಗಾಚಾರ ವಿರತಿಗೆ ।
ದಾನಪಾನಾದಿಗಳಿಗಿದು ಮೊದಲರಿಯಿರೈ ನೀವು ॥ ೩೩ ॥

ವೇಷಧರಿಸುತ ಭಕ್ತನೆಂದರೆ ।
ಈಶಭಕುತನುಮಾಗಲರಿಯನು ।
ಆಶಿಯಳಿದಾ ಭಕ್ತಿಯಾಂತರೆ ಭಕ್ತನಾಗುವನು ॥
ಆ ಶಿವನು ಸದ್ಭಕ್ತರಾಗುಣ ।
ಸೋಸಿನೋಡುತ ಭಕ್ತನಹುದೆಂ ।
ದಾಶಿರ್ವಾದಿಸುವನಲ್ಲದೇ ವೇಷಕ್ಕೆ ವಲಿಯನವ ॥ ೩೪ ॥

ಪರವನಿತೆ ಪರರರ್ಥ ಮತ್ತಾ ।
ಪರರದೈವಕೆ ಪರಮತಕೆ ಹಾ ।
ತೊರೆವನವನೇಂ ಭಕ್ತನೇ ಶೀವರಿಯಿರ್ಕೈ ನಾಡೆ ॥
ಹರನ ನೆನೆಯಿರಿ ಲಿಂಗವರ್ಚಿಸಿ ।
ಶಿರದೆ ಚರರಂ ತೃಪ್ತಿಗೊಳಿಸಿರಿ ।
ಧರಿಸಿರ್ಕೈ ಭಸ್ಮವನು ಗುರುವಚನವನು ನೆರೆನಂಬಿ ॥ ೩೫ ॥

ಬಂದ ಜಂಗಮರನ್ನು ಕುಲಗೋ ।
ತ್ರೊಂದು ಕೇಳದೆ ವಂದಿಸುತಲಾ ।
ನಂದವಿಗೆ ಹರುಷದಲಿ ಹರನೆಂದವರ ತಿಳಿಯುತಲಿ ॥
ಹೊಂದಿ ಪದಪದ್ಮಗಳಿಗತಿಮುದ ।
ದಿಂದ ಪೂಜಿಸಿ ತೃಪ್ತಿಸುವುದೇ ।
ಇಂದುಧರವರ ಭಕ್ತಿಸತ್ಯವು ಭಕ್ತರೇ ಕೇಳಿ ॥ ೩೬ ॥

ಜನರು ತನ್ನಂ ಬಯ್ಯುಲುಂ ಮೇಣ್ ।
ಯೆನಿತುನಿಂದಿಸೆ ಶಾಂತಿಸ್ಥಿರಣೆ ।
ಮನದಲಿರೆ ದೇವತ್ವಮೆನಿಪುದು ಮರಳಿ ತಾನವರ ॥
ಮನಕೆ ಬಂದಂತೊಂದಕೆಂಟನು ।
ಮುನಿಸಿನಿಂದಂ ಬೈವಗುಣವದು ।
ವಿನುತ ಭಕ್ತಗೆ ಸಲ್ಲದೈ ಭೂಕ್ಷಮೆಯನಾಂತಿಹುದು ॥ ೩೭ ॥

ತಪ್ಪುಮಾಡದೆ ಬೈದರವರಂ ।
ತಪ್ಪು ತಪ್ಪೆನಬೇಕು ನೊದಲಿನ ।
ತಪ್ಪುವುಳ್ಳೊಡೆ ಬೈವರಲ್ಲದೆ ಮುಂದೆ ತನ್ನಿಂದ ॥
ತಪ್ಪುತಾಗದ ಶೆರದೊಳೆಚ್ಚರ ।
ವಿರ್ಪುದೆನುತವರ್ ಪೇಳ್ವರೆನುತಲಿ ।
ಸುಪ್ರಮೋದದಲಿರುವುದಿದು ಭಕ್ತರಿಗೆ ಭೂಷಣವು ॥ ೩೮ ॥

ಬಡಿದು ಭಂಗಿಸಿದವರನುಂ ತಾ ।
ಬಡಿಯಲಾಗದು ಭಕ್ತನಾದಡೆ ।
ಗಿಡವು ಕನಗಾಜಲವನೆರೆದಾ ಕೋರ್ವನಿಗೆ ನೆರಳು ॥
ಕೊಡುವುದೇ ಕೊಡದಿಹುದೆ ತನ್ನನು ।
ಕಡಿಯ ಬಂದವಗೀಯುದೇ ನೆರ ।
ಳ್ನೊಡನೆಯುದರನುವರಿದು ವರ್ತಿಪುದೆಂನ ಗುರುರಾಯ ॥ ೩೯ ॥

ಹರನದಯ ತನಗಿರಲು ದುರ್ವಿಷ ।
ದುರುಗ ಕಚ್ಚಿದರೇನು ಹಾನಿಯೊ ।
ದುರುಳನಿಂದಕರಿಂಗೆ ವಂದಿಸುತಿರುವುದೇ ಮೇಲು ॥
ಹರನ ಭಕ್ತಗೆ ಶರಣೆನಿಪುದೈ ।
ಪರಸುತಿರ್ಪುದು ಕೆಡುಕು ನುಡಿಯದೆ ।
ಪರಮಶಾಂತಿಯಲಿರುವುದೇ ಭಕ್ತಂಗೆ ಲಕ್ಷಣವು ॥ ೪೦ ॥

ಮರಣದಲಿ ಮದುವೆಯಲಿ ಭೋಗದಿ ।
ಬರದ ಹಾನಿಯಲಾಂತ ಲಾಭದಿ ।
ಸಿರಿ ದರಿದ್ರತೆ ಜಯಪರಾಜಯ ನಿಂದೆಸ್ತುತಿಗಳಲಿ ॥
ಸರಿಯೆನಿಸಿ ಹರುಷಿಸದೆ ದುಃಖಿಸ ।
ದೆರಡು ಸಮಗಂಡವನೆ ಶಾಂತನು ।
ಮರೆದ ಮನದಲಿ ಡಿಂಭಮಾತ್ರದಲಾಡುತಿಹನವನು ॥ ೪೧ ॥

ಧರಣಿಪಾಲಕರಲ್ಲಿ ತಪವು ।
ಳ್ಳರಲಿಯಾಜ್ಞಿಕರಲ್ಲಿ ಶಾಸ್ತ್ರದ ।
ಗುರುತವಣೆ ಬಲುಜಾಣರಲಿ ಗುಣಿಗಳಲಿ ಧನಿಕರಲಿ ॥
ಹಿರಿದು ಸತ್ವನಿಶಿಷ್ಟರಲಿ ತಾ ।
ನಿರುತದೀ ಸಾಧ್ಯರಲಿ ಪೂಜ್ಯನು ।
ಸುರನರೋರಗರಲ್ಲಿ ಶ್ರೇಷ್ಠನು ಶಾಂತಿಯೊಂತವನು ॥ ೪೨ ॥

ಬಂದುದನು ಭೋಗಿಸುತ ಬಾರದು ।
ದೊಂದು ನೆನೆಯದೆ ಹಿಂದು ಮುಂದಣ ।
ದಂದುಗವ ಸರಿಗಂಡು ಸುಖದುಃಖಗಳ ತಾಳದಿಹ ॥
ನಿಂದನೆಲೆಯುಳ್ಳವನೆ ತುಷ್ಟನು ।
ಸಂದೆಗವೆ ಸಮನಲ್ಲರಾತಗೆ ।
ಮಂದಭಾಗ್ಯರು ಹರಿಹರಾದಿಗಳಾತನಿದಿರಿನಲಿ ॥ ೪೩ ॥

ಜಗದ ಸುಖವನು ಬಗೆಯದಲೆ ತಾ ।
ಮೃಗಧರನ ಭಕ್ತಿಯನು ಕೈಕೊಳು ।
ತಗಣಿತೋತ್ಸವದಿಂದೆ ಧನಧಾನ್ಯಗಳ ಕೂಡಿಸುತೆ ॥
ಅಗಜೆಯಾಣ್ಮನ ಭಕ್ತಿಗೈಯ್ಯಲು ।
ಹಗರಣದ ಬಡತನವೆ ತನಗುಂ ।
ಸೊಗಸು ಪರಧನಕಾಶೆಗೈವದು ಕೇಡುಬಲು ಕೇಡು ॥ ೪೪ ॥

ದೊರೆಕಿಸುತ ಮಾನವನು ಧನವನು ।
ದುರಿತಕಾರ್ಯಕೆ ವೆಚ್ಚಮಾಳ್ಪೊಡೆ ।
ಬರುವುದೇ ಪುಣ್ಯವದು ಪಾಪವನೀಹುತಿಹುದಾಗಿ ॥
ಸಿರಿಮದದಿ ಬರಿಬಿನದದುಂದಿನೊ ।
ಳಿರಿಸಿ ಸಂತತ ಕಲಹ ಕಂಟಕ ।
ಪರಿಪರಿಯ ದುಸ್ಸಾಧನದಿ ಧನವೆಚ್ಚಿಸಲು ದ್ರೋಹ ॥ ೪೫ ॥

ಧನಮದವು ದುರ್ಧರವು ಬಳಲುವ ।
ಜನರು ಕೊಂಡಾಡುತಲಿ ಧನಿಕನ ।
ಮನೆಗೆ ಬಂದೊಡೆ ಮೋರೆ ತಿರುಗಿಸಿ ಕುಳಿತು ನುಡಿಯದಲೆ ॥
ವಿನಯ ಸುಗುಣಗಳವನ ಸಮ್ಮುಖ ।
ಕನುವಿನಿಂ ಬರಲೆದ್ದು ಮನೆಯೊಳು ।
ತಿನಲು ಪೋಗುವನಿನಿತು ಧನಮದ ಕೊಳುಬಲು ಕಾಳು ॥ ೪೬ ॥

ತನ್ನ ಬಾಂಧವರಾಪ್ತ ಜನರಂ ।
ಮನ್ನಿಸನು ಸುಜನರನು ಸೇರನು ।
ಗನ್ನಗತಕರ ಸಂಗಸಲುಗೆಯು ಹೊಸೆವ ಗುಣಹೀನ ॥
ಸನ್ನುತಾಮಳ ಶೈವಭಕ್ತಿಯು ।
ಮುನ್ನವೇನಿಂದಿಪನು ಧನಮದ ।
ಕುನ್ನಿ ಮದಕರಿ ಮಹಿಷಮದದಿಂದಧಿಕನೀ ಜಗದಿ ॥ ೪೭ ॥

ಪರರ ಕೀರ್ತಿಗೆ ಕುಂದನೀಯುವ ।
ನಿರದೆಯಾತ್ಮಸ್ತುತಿಗೆ ಹಿಗ್ಗುವ ।
ಗುರುವತನದಿಂದೆಲ್ಲರಲಿ ತಾ ನಧಿಕನೆನುತಿರುವ ॥
ಸಿರಿಮದದಿ ಸಿರಿಯಿಲ್ಲವೆನುತ ।
ನ್ಯರನು ಕಂಡರೆ ಜರಿದು ಝುಂಕಿಸಿ ।
ಮೆರೆವನರ್ಥಮದಾಂಧನುವಿವೇಕದಲಿ ಮೈಮರೆದು ॥ ೪೮

ಹಮ್ಮಿನಿಂ ವಿಧಿಕರೆದು ಕೊಳ್ಳುವ ।
ಹಮ್ಮಿನಿಂ ಹತವಾಗಿ ಪೋಗುವ ।
ಹಮ್ಮಿನಿಂದಮರಾಸುರರ್ನರ ಪಶುಗಳೆನಿಸಿದರು ॥
ಹಮ್ಮು ಶಿವಪದ ಭಕ್ತಿಮೂಲಕೆ ।
ಯುಮ್ಮಳಂ ಗೊಡುತಿಹುದು ಜೀವಿಗೆ ।
ಹಮ್ಮುತಾಭವ ಬೀಜಮೆನಿಸುವುದಾಗಿರಿಸ ಮುದದಿ ॥ ೪೯ ॥

ಹಿತವನಹಿತವ ತಿಳಿಯದಲೆ ಶ್ರೀ ।
ಯುತನ ಕಾರ್ಯಂ ಗೈವನಲ್ಲದ ।
ಲತಿಶಯದ ಧನನಿಷ್ಪ್ರಯೋಜನ ಕಾರಣಮದೆನಲು ॥
ಮತಿಯುತರು ಮನವೊಪ್ಪಲಾರರು ।
ಕೃತಕ ಮಾರ್ಗದಿ ಜಾರುತಿಪ್ಪುದ ।
ಸತತ ಸನ್ಮತದಿಂದ ಶಿವಭಕ್ತಿಯನು ಗೈಯುವುದು ॥ ೫೦ ॥

ಗುರಚರಾರ್ಯರ ಸೇವೆಯಲಿ ತಾ ।
ಪರಮ ಭಕ್ತಿಯನಾಂತು ದುಡಿಯುತ ।
ದೊರಕಿದರ್ಥವನೀಡಿ ಗೈಯುವ ಭಕ್ತಿಯುತ್ತಮವು ॥
ಹಿರಿಯರಾರ್ಜಿತ ಮಧ್ಯಮಂ ಬಲು ।
ದುರುಳತನದಲಿ ಧನವಕೂಡಿಸಿ ।
ಗರುವತನದಲಿ ಗೈವುದೆಲ್ಲವು ಅಧಮ ಪೆಸರಿನದು ॥ ೫೧ ॥

ಸಾಲಕೊಡುವಡೆ ಕೊಡುವುದಾ ಘನ ।
ಶೀಲಚರಗುರುಭಕ್ತರಿಗೆ ಸದ ।
ಯೊಳು ಧರ್ಮಿಷ್ಟರಿಗೆ ಕೊಡಲಾಧನವು ಸತ್ಪಾತ್ರ ॥
ಕಾಲವೀರಲು ಬಾರದಿರಲಾ ।
ಶೂಲಿಗರ್ಪಿತವಹುದು ದುರ್ಜನ ।
ಜಾಲಕಿತ್ತೊಡೆ ಧನವು ರಜಕನ ಶುನಿಯತೆರನಹುದು ॥ ೫೨ ॥

ಲಿಂಗಪೂಜಿಪ ಭಕ್ತಮುಹಿಮರ ।
ಸಂಗದೊಳಗಿರಲೇಸು ದುರ್ಗಣ ।
ಹಿಂಗವುದು ತನ್ನಿಂದಲನ್ಯರಿಗಹುದು ನಿಜಸುಖವು ॥
ಸಂಗಸಜ್ಜನದಿಂದ ಲಾಭವು ।
ಭಂಗವಾಗ್ವುದಸತ್ಯವದರಿಂ ।
ತುಂಗ ಭಕ್ತರು ಸತತ ಶಾಂತರ ಸಂಗದೊಳಗಿಹುದು ॥ ೫೩ ॥

ಗುರುವು ತನ್ನನು ಮುನಿದೊಡಂ ಘನ ।
ಪರಕೆಯೆಂದೇ ತಿಳಿದು ಸದ್ಗುರು ।
ಚರಣಸೇವೆಯ ಗೈವುದಲ್ಲದೆಯವರ ಸನ್ನಿಧಿಯ ॥
ಜರಿದು ಪೋಗುತಲನ್ಯ ಗುರುವಿನ ।
ನೆರೆಯ ಸೇರಲು ಭಕ್ತನಲ್ಲವ ।
ನರಕಿ ನರಕದ ಹಿರಿಯ ಭವದಲಿ ತಿರುಗುವನು ಬಿಡದೆ ॥ ೫೪ ॥

ಹೇಡಿ ಭಟ ಯುದ್ಧದಲಿ ಹಿಂಜರಿ ।
ದೋಡಿ ಪೋಪನು ಕಲಿಯು ಸಮರದಿ ।
ಮಾಡುವನು ಸಾಹಸವ ನೋಡದೆ ಡಾಂಭಿಕರು ವ್ರತವ ॥
ಮಾಡುತಲಿ ಸಂಕಟದಿ ಬಿಡುವರು ।
ನಾಡೆ ರವಿ ಪಡುವಣದಿಯುದಿಸಲು ।
ಆಡಲೇಂ ಮಾಳ್ಪವ್ರತವ ಬಿಡರಭವ ಭಕ್ತರುಗಳ್ ॥ ೫೫ ॥

ವೀರನಾಗುಣ ಯುದ್ಧದೊಳು ನಿಜ ।
ನಾರಿಗುಣದಾರಿದ್ರದೊಳು ಹಿತ ।
ಕಾರಿ ಗುಣವಾಪತ್ತಿನೊಳು ಶ್ರೀಯುತನು ಕೊಟ್ಟಿರುವ ॥
ಸಾರರುಣ ಕೇಳ್ವೆಡೆಯೊಳಾರುಣಿ ।
ಸಾರತಿಳಿಗುಮಪಾರ ಜಂಗಮ ।
ವಾರಕಾಟದೊಳಭವ ಭಕ್ತರ ಭಕ್ತಿ ತಿಳಿಯುವುದು ॥ ೫೬ ॥

ಸಿರಿಯು ಸಂಪದವಲ್ಲ ಕನಸಿನ ।
ತೆರದಿ ತೋರುತಲಿಲ್ಲವಾಗ್ವುದು ।
ಅರಳ್ದ ಪೂವಿನತೆರದಿ ಯುವ್ವನವಿಳಿದು ಪೋಗುವುದು ॥
ಅರಿಯೆ ಕ್ಷಣಮಿದು ಮಾಯೆ ಆಯುಂ ।
ಕಿರಿದು ನೆಚ್ಚಿಕೆಯಿಲ್ಲ ನರರೇ ।
ಬರಿದೆ ಕೆಡಬೇಡಿರಿ ಮಹಾ ಎಚ್ಚರಿಕೆ ತಿಳಿರೆಂದ ॥ ೫೭ ॥

ಎಣ್ಣೆಯುಂಡಿಹ ಪತ್ರದಲ್ಲಿಯು ।
ತ್ಪನ್ನವಾಗವು ಬರೆಯಲಕ್ಷರ ।
ಬಿನ್ನವಿಷಯದಿ ಮಗ್ನಮನದೊಳು ಭಕ್ತಿ ನೆಲೆಗೊಳದು ॥
ತನ್ನಿಮಿತ್ಯಂ ಪರಮ ಗುರುವಿನ ।
ವುನ್ನತದ ಸೇವೆಯೊಳಿರಲವು ।
ತ್ಪನ್ನವಾಗುತ ಭಕ್ತಿ ಮನದೊಳು ನೆಲೆಗೊಳುವುದನಿಶಂ ॥ ೫೮ ॥

ಭಕ್ತರಿಗೆ ಭಕ್ತಿಯದೆ ಭೂಷಣ ।
ಭಕ್ತಿಯುಕ್ತನೆ ಯೋಗ್ಯನೆನಿಪನು ।
ಭಕ್ತಿಯುಕ್ತನುವಾಗದೆ ಮುಕ್ತಿಯು ದೊರೆಯದೆಂದು ॥
ಭಕ್ತಿಯಿಲ್ಲದ ಗೃಹವಯೋಗ್ಯವು ।
ಭಕ್ತಿಯಿಲ್ಲದವಪ್ರಸಿದ್ಧನು ।
ಭಕ್ತಿಯೇ ಕಾರಣವು ಸಕಲರಿಗೆಂದ ಗುರುರಾಯ ॥ ೫೯ ॥

ಭಕ್ತಿಮಾರ್ಗವೇ ಶ್ರೇಷ್ಠವೆಂಬುವ ।
ಭಕ್ತಿಯೇ ಸನ್ಮಾರ್ಗವೆಂಬುವ ।
ಭಕ್ತಿಯೇ ಸ್ವರ್ಗಾಪವರ್ಗದ ಹೇತುವೆಂದೆನುವ ॥
ಭಕ್ತಜನಮನದಾ ಬಯಕೆಯಾ ।
ಸಕ್ತಿಯಿಂ ತೀರಿಸುತೆಯವರಿಗೆ ।
ಮುಕ್ತಿಪಥವಂ ತೋರುವಾ ಸದ್ಭಕ್ತ ಸಕಲರಿಗೆ ॥ ೬೦ ॥

ಬಳಸದದ್ವೈತವನು ಬಾಹ್ಯದೊ ।
ಳೊಳಗೊಳಗೆ ಸುವಿವೇಕ ಭಾವನಿ ।
ತಿಳಿದು ನೆರೆಸಚರಾಚರ ಪ್ರಾಣಿಗಳೊಳಗೆ ಶಿವನು ॥
ನೆಲಸಿರುವ ತಿಲದೊಳಗೆ ತೈಲವು ।
ನೆಲಸಿದಂದದೊಳೆಂದು ನಂಬುವು ।
ದಿಳೆಯೊಳೆಲ್ಲಾ ಭಕ್ತವೃಂದವದೆಂದ ಗುರುರಾಯ ॥ ೬೧ ॥

ಶಿವನೆಗುರವುಸುಶಿವನೆ ಲಿಂಗವು ।
ಶಿವನೆ ಜಂಗಮುವೆನಿಸಿ ತ್ರಿಜಗದಿ ।
ಯವಿರತಂ ಮೆರೆಯುತ್ತಲಿರ್ಪನು ಸಕಲ ಜಗವರಿಯೆ ॥
ಶಿವನಲಿಂಗವ ಮಾಡಿ ಕಂಠದಿ ।
ತವೆಧರಿಸುವವ ಭಕ್ತನೆನಿಪಂ ।
ಶಿವನ ಮರೆಯದೊಲಿರ್ಪವನೆ ಸದ್ಭಕ್ತನವನೆನಿಪಂ ॥ ೬೨ ॥

ಶಿವಯೆನಲು ಪಾಪವದು ನಶಿಪುದು ।
ಶಿವಯೆನಲು ಬಂಧನವದಳಿವುದು ।
ಶಿವಯೆನಲು ಸಂತಾಪ ಕೋಪಗಳಡಗಿ ಪೋಗುವವು ॥
ಶಿವಯೆನಲುವೈಶ್ವರ್ಯ ಬಪ್ಪುದು ।
ಶಿವಯೆನಲು ಸದ್ಗತಿಯು ದೊರೆವುದು ।
ಶಿವಭಕುತಿಯಿಂ ಸರ್ವಸಾಧ್ಯವು ತಿಳಿಯಿರಿದನೆಂದಂ ॥ ೬೩ ॥

ಪಾಪಪುಣ್ಯಗಳೆರಡರಿಂದಲೆ ।
ರೂಪವನು ಧರಿಸುತ್ತೆ ಭುವದಿ ।
ತಾಪವನುಗೊಳ್ಳುತ್ತೆ ಸ್ವರ್ಗಾದ್ಯಖಿಳ ನರಕಗಳ ॥
ತಾಪಪಡೆಯುತ ಜನನ ಮರಣವ ।
ನೀಪರಿಕ್ರಮದಿಂದೆ ಪೊಂದುತೆ ।
ಲೋಪವಾಗ್ವದು ಮುಕ್ತಿ ಭಕ್ತಿಗೆ ಮುಕ್ತಿಯದು ಸಾಧ್ಯಂ ॥ ೬೪ ॥

ರೆಕ್ಕೆಯೆರಡರ ಬಲದಿ ಗಗನಕೆ ।
ಪಕ್ಕಿಗಳು ಪಾರುವೊಲು ಮುಕ್ತಿಗೆ ।
ರೆಕ್ಕೆಗಳ ಪರಿಯಂತೆ ಕರ್ಮಜ್ಞಾನಗಳಿವೆರಡು ॥
ಲೆಕ್ಕಕಿರಬೇಕಲ್ಲದೇ ಒಣ ।
ಸೊಕ್ಕಿನಿಂ ಕರ್ಮವನು ಬಿಡಲವ ।
ಗಕ್ಕದೇ ಜ್ಞಾನೊಂದರಿಂದಲೆ ಮೋಕ್ಷವದು ತಾನು ॥ ೬೫ ॥

ಬತ್ತಿಯೆಣ್ಣೆಯ ಪ್ರಣತಿಯೊಳು ಹಾ ।
ಕುತ್ತಿ ಕಡ್ಡಿಯು ಕೊರೆದು ಹಚ್ಚದೆ ।
ಕತ್ತಲೆಯು ತಾಪರಿದು ಸುತ್ತಲು ಬೆಳಕದಾಗುವದೇ ॥
ಮತ್ತೆ ಗುರುಚರ ಸೇವೆ ಮಾಡದೆ ।
ಚಿತ್ತವೃತ್ತಿಯನೊತ್ತಿ ಬಿಡದಲೆ ।
ಸ್ತುತ್ಯಘನಭಕ್ತಿಯನು ತಾಳದೆ ಮುಕ್ತಿಕನಸೆಂದ ॥ ೬೬ ॥

ಕ್ಷಿತಿಯೊಳೆಲ್ಲಾ ಯೋಗಿಗಳಿಗಾ ।
ವಿಶಕವಾದಾ ಭಕ್ತಿಯೋಗವೆ ।
ಅತುಳ ಮುಕ್ತಿಯ ದೊರಕಿಸುವುದಕೆ ಸುಲಭ ಪಥವೆಂದು ॥
ಸತತ ವೇದಾಗಮಗಳೆಲ್ಲವು ।
ಅತಿಶಯದೆ ಸಾರುತ್ತಲಿರ್ಪವು ।
ಮತಿಯುತರು ನೀವಾಗಿ ಭಕ್ತಿಗೆ ವೊರೆಪೊಗುವುದನಿಶಂ ॥ ೬೭ ॥

ಧರಣಿ ತಲದೊಳು ಭಕ್ತಿಗಿಂತಂ ।
ಪಿರಿದು ತಪವಿಲ್ಲೆನುತೆ ವೇದವು ।
ನಿರುತವೊರೆವುದು ಭಕ್ತಿರೇವ ಗರೀಯಸೀ ಎನುತೆ ॥
ತಿರೆಯೊಳಗೆ ಘನ ಘನಮಹಾತ್ಮರು ।
ಪರಮ ಭಕ್ತಿಯಪೊಂದಿ ಸಂತತ ।
ನಿರುಪಮವದಾಗಿರುವ ನಿತ್ಯಾನಂದ ಸುಖವಡೆದರ್ ॥ ೬೮ ॥

ಧರಣಿ ತಲದೊಳಗಿಂತು ಘನತೆಯ ।
ನಿರದೆ ಪಡೆದಾ ಭಕ್ತಿಯನ್ನಾಂ ।
ತುರುತರದ ಗುರುಲಿಂಗಜಂಗಮ ಸೇವೆಯೊಳಗಿರ್ದು ॥
ಪುರಹರನ ಘನಕರುಣೆ ಪಡೆದುಂ ।
ಪರಮ ನಿತ್ಯಾನಂದ ಸುಖಮುಂ ।
ನಿರುತಮನುಭವಿಸುತ್ತ ಧನ್ಯತೆವಡೆಯಿರ್ಕೆ ಎಂದಂ ॥ ೬೯ ॥

ಪರಮತರದೀ ಯತಿಪುರಾಣವ ।
ನುರುಮುದದೊಳೋದುವರಿಗಂ ಪೇ ।
ಳ್ವರಿಗೆ ಆಲಿಸುವರಿಗೆ ಸದ್ಗುರು ಕೋರಿಸಿದ್ಧೇಶಂ ॥
ಚಿರತರಾಯುರರೋಗ್ಯವೈಸಿರಿ ।
ಪರಮವಿದ್ಯೆ ಸುಭಕ್ತಿವೊದಲಾ ।
ಗಿರುವ ಸತ್ಫಲಗಳನು ಕರುಣಿಸುತಿರ್ಪ ನಿದುದಿಟವು ॥ ೭೦ ॥
ಅಂತು ಸಂಧಿ ಒಂಭತ್ತಕ್ಕಂ ಪದನು ೪೨೫ ಕ್ಕಂ ಮಂಗಲಂ ಮಹಾ

ಶ್ರೀ ಶ್ರೀ ಶ್ರೀ

॥ ಶ್ರೀಗುರು ಕೋರಿ ಸಿದ್ಧೇಶ್ವರಾಯನಮಃ ॥



# ಹತ್ತನೆಯ ಸಂಧಿ

ಸೂಚನೆ— ಗುರುವರನು ಕಾಕಂಡಿ ಪುರದೊಳು ।
ನೆರೆವ ಭಕ್ತರುಗಳಿಗೆ ಅಷ್ಟಾ ।
ವರಣ ಪಂಚಾಚಾರ ಷಟುಸ್ಥಲಗಳನು ಬೋಧಿಸಿದಂ ॥

ತೊಗಲು ತಲೆಯೋಡುಗಳ ಧರಿಸುತ ।
ಜಗದಿ ಭಿಕ್ಷವ ಬೇಡಿ ತಿಂಬುವ ।
ಹಗರಣಿಗನೀನಿರ್ದ ನಿನ್ನಯ ಬಗೆಯನೀಕ್ಷಿಸದೆ ॥
ಅಗಜೆಯರ್ಧಾಂಗಿನಿಯಳಾಗಿರೆ ।
ಬಗೆದು ಮುನಿಗಳ ನಿನ್ನಪದವಂ ।
ಪಗಲಿರುಳು ಸ್ತುತಿಗೈವರೆಂದಾ ನಮಿಪೆ ಮೃಡಪೊರೆಯೋ ॥ ೧ ॥

ಗುರುವರನು ಪಟ್ಟಾಧಿಕಾರವ ।
ನೆರೆವಹಿಸಿ ಕುಶಲದೊಳಗಿರಲಾ ।
ಮೆರೆವ ಕಾಕಂಡಿಯ ಸುಭಕ್ತರು ಸಿದ್ಧಗುರುವರನ ॥
ಪರಮ ಸನ್ನಿಧಿಗಾಗಮಿಸಿ ಗುರು ।
ವರನ ಚರಣಕೆ ನಮಿಸಿಯೆಮಗಿಂ । ॥ ೨ ॥
ದಿರದೆ ಅಷ್ಟಾವರಣಗಳ ಬೋಧಿಸಲು ಬೇಕೆಂದರ್

ಆದೊಡೆಲೆ ಭಕ್ತೋತ್ತಮರೆ ।
ಗಾದಿ ಗುರು ಮಹಿಮೆಯನು ಪೇಳಲು ।
ಸಾಧ್ಯಮಲ್ಲವಸಾಧ್ಯವಾದಯ ಗುಣಿಯ ಸಚ್ಚರಿತ ॥
ವೇದಸ್ಮೃತಿತತಿಗಳಿಗಗೋಚರ ।
ವಾದಿಶೇಷಂಗರಿದು ಯೆನ್ನಿಂ ।
ದಾದನಿತು ಬೋಧಿಸುವೆನೀವಾದರದಿ ಕೇಳುವುದು ॥ ೩ ॥

ಗುರುವೆ ಬೊಮ್ಮನು ಗುರುವೆ ವಿಷ್ಣುವು ।
ಗುರುವೆ ಗೌರೀನಾಥನಾ ಸ ।
ದ್ಗುರುವೆ ಸಾಕ್ಷಾತ್ ಶೀಕ್ಷೆ ದೀಕ್ಷಾಮೋಕ್ಷ ಕಾರಣನು ॥
ಗುರುವೆ ಸರ್ವಾರ್ಥೇಷ್ಟದಾತನು ।
ಗುರುವೆ ಕಲುಷ ಕುಪಂಕಧೂತನು ।
ಗುರುವೆ ಪುಣ್ಯಪುನೀತ ಪರಮಪವಿತ್ರ ಶುಭಗಾತ್ರ ॥ ೪ ॥

ಧರೆಗೆ ಹರನಿಂದ್ಯೆವವಿಲ್ಲವು ।
ಸರಿಯ ಬಂಧುಗಳಿಲ್ಲ ವಿದ್ಯಕೆ ।
ಪೊರೆಯುವಾವರ ಮಾತೆಗಿಂ ಪ್ರಿಯಕರರುಮಿನ್ನಿಲ್ಲ ॥
ತರುಣಿಗಿಂ ಸುಖಭೋಗಮೇರತಿ ।
ವತರಿಗಿಂ ಭಟವೀರನೇ ಗುರು ।
ವರನಿಗಿಂ ದಿಟವಾದ ಸೇವ್ಯರುಮಿಲ್ಲ ತ್ರಿಭುವನದಿ ॥ ೫ ॥

ಇಳೆಯೊಳಗೆ ಜನಮುನಿದೊಡಾ ಶಿತಿ ।
ಗಳನು ಪರಿಹರಿಸುವನು ಪರಶಿವ
ನಿಲದೆ ಮುನಿದೊಡೆ ಅದನು ನೆರೆಪರಿಹರಿಪ ಸದ್ಗುರುವು ॥
ವಿಲಸಿತಾಗುರುವರನು ಮುನಿದೊಡೆ ।
ಸಲೆ ಪರಿಕಿಸಲು ತ್ರೈಭುವನದೊಳು ।
ಸಲಹುವರೆ ಯಾರಿಲ್ಲವೆನುತಂ ಶ್ರುತಿಯು ಸಾರುವದು ॥ ೬ ॥

ನಿಷ್ಠೆಯಲಿ ಗುರುಸೇವೆಯನು ಮನ ।
ಮುಟ್ಟಿಮಾಡುವದನ್ಯ ಸೇವೆಯು ।
ಕಷ್ಟಜನ್ಮಕೆ ಕಾರಣಾಗುತ ಹುಟ್ಟುವುದೆ ನಿಜವು ।
ಶ್ರೇಷ್ಠಗುರುಪದ ಪೂಜೆಸುಖವು ।
ತ್ರಷ್ಟಗುರುಪದ ಧ್ಯಾನವೆಂಬುದು ।
ಶಿಷ್ಟಗುರು ಕೃಪೆನಷ್ಟಗೈವುದು ಜನನಮರಣವನು ॥ ೭ ॥

ಸತ್ಯಗುರುವರ ಮಹಿಮೆಯಿಂತಿದು ।
ವಿಸ್ತರಿಸಿ ಪೇಳಿದೆನು ಶಿವಭ ।
ಕ್ತೋತ್ತಮರೆ ಗುರುಪದವನಂಬುತ ಧನ್ಯರಾಗುವುದು ॥
ಮತ್ತೆಲಿಂಗದ ಮಹಿಮೆ ಪೇಳ್ವುದು ।
ಕರ್ತೃಗುರುವರನೆಂದು ಪದದಲಿ ।
ಭಕ್ತಿಯಿಂ ಶಿರಬಾಗಿ ನಮಿಸಲು ಪೇಳತೊಡಗಿದನು ॥ ೮ ॥

ಲಿಂಗಮಹಿಮೆಯನೊರೆವೆ ಸಲೆಗುಣ ।
ಪುಂಗವರೆ ನಿಮ್ಮಯ ಮನಕರಣ ।
ಲಿಂಗವಾಗ್ವುದು ಕೇಳ್ವುದದರಿಂ ಲಿಂಗಮಹಿಮೆಯದು ॥
ಸಂಗಿಸುತ ನಿಮಗದರ ಸುಖದಿಂ ।
ದಂಗಲಿಂಗವದೇಳವಾಗುತ ।
ಅಂಗಚಾರಿಯು ಪದವಿ ಪೊಂದುವಿರಿದು ನಿಗಮಸಿದ್ಧ ॥ ೯ ॥

ಲಿಂಗಬಿಟ್ಟೇನಿಲ್ಲ ಸರ್ವವು ।
ಲಿಂಗಮಯವಾಗಿರ್ಪುದಲ್ಲದೆ ।
ಲಿಂಗಬಾಹ್ಯಂ ನಾಸ್ತಿಯೆಂದಿಹುದಾಗಮದ ವಚನ ॥
ಲಿಂಗನಿಷ್ಕಲ ವಸ್ತು ಪರಶಿವ ।
ಲಿಂಗಚಿದ್ಘನ ಶಾಂತಿನಿರವಯ ।
ಲಿಂಗಚೇತನ ರೂಪಭವಭಯ ಲೋಪನಿರ್ಲೇಪ ॥ ೧೦ ॥

ಪರಕಿಪೊಡೆ ಕುರಿಯಿಕ್ಕಿ ಬಳ್ಳವು ।
ತರುಣಿಯ ಸ್ತನವಾಗಿಯಾದುವ ।
ನಿರದೆ ಲಿಂಗಮದೆಂದು ನಂಬಿದ ಭಕ್ತರಿಗೆ ಫಲವು ॥
ದೊರೆದುದೆನೆ ಗುರುಕೃಪೆಯ ಕಡಲೊಳು ।
ಕರಕೆ ಲಭಿಸಿರ್ಪಿಷ್ಟ ಲಿಂಗ ।
ಸ್ಫುರಿತ ಚಿಂತಾಮಣಿಯ ನಂಬಿದವರ್ಗೆ ಸರಿಗಾಣೇಂ ॥ ೧೧ ॥

ಪೊಳೆವ ಭಕ್ತರೆ ನಾಡೆ ಕೇಳಿರಿ ।
ಲಲಿತಲಿಂಗದ ಮಹಿಮೆ ಬಹು ಘನ ।
ತಿಳಿದು ಪೂಜಿಸಲಮಲ ಮುಕ್ತಿಯನೀವ ಮಹದೇವ ॥
ಕಲಿಗಣನು ಕನ್ನಯ್ಯ ದೀಪದ ।
ಕಲಿಯು ನಂಬಿಯು ಪೆದ್ದಿದೇವನು ।
ಮಲಹರಾತ್ಮಕರಿವರು ನೊದಲಿಗರಲ್ಲದೇ ಮತ್ತೆ ॥ ೧೨ ॥

ಲಿಂಗಭಕ್ತನು ಕಾಟಕೂಟನು ।
ಲಿಂಗ ಭಕ್ತನು ಸುರಗಿ ಚೌಡನು ।
ಲಿಂಗಭಕ್ತನು ಚೋಳನೃಪತಿಯು ಸೂಳೆ ಚೋಳವ್ವೆ ॥
ಲಿಂಗಭಕ್ತನು ಮುಗ್ಧಸಂಗನು ।
ತುಂಗಮಾರ್ಕಾಂಡೇಯ ಚಂಡನು ।
ಲಿಂಗಘನ ಘಟಿವಾಳ ನಿವರನು ಲಿಂಗವೆನುತೊಪ್ಪ ॥ ೧೩ ॥

ಲಿಂಗಮಹಿಮೆಯ ಪೇಳಿ ಕೇಳುತ ।
ಮಂಗಲಾತ್ಮಕ ಧನ್ಯರಾದೆವು ।
ಜಂಗಮದ ಘನಪೇಳ್ವುದೆನುತಲಿ ಪರಮ ಭಕ್ತರು ತಾವ್ ॥
ಅಂಗವನು ಚಾಚುತ್ತನಮಿಸಲು ।
ತುಂಗಗುರು ಸಿದ್ಧೇಂದ್ರನಾಗಳ್ ।
ಲಿಂಗಗುರುವಿಂ ಘನವದಾದಾಚರ ಮಹಿಮೆ ಕೇಳಿ ॥ ೧೪

ಜಂಗಮಂ ಪಾವನವು ಜಗದೊಳು ।
ಜಂಗಮಂ ಜಗದೀಶ ನಿಃಕ್ರಿಯು ।
ಜಂಗಮಂ ಜಗಪೂಜ್ಯಪದ ಪದನಾಲ್ಕನತಿಗಳೆದ ॥
ಜಂಗಮಂ ನಿಃಶೂನ್ಯ ನಿರವಯು ।
ಜಂಗಮಂ ತ್ರೈವರ್ಣಶೂನ್ಯಂ ।
ಜಂಗಮಂ ಚಿದ್ರೂಪ ಚಿತ್ಕಲ ಚಿನ್ಮಯಂ ತಾನೆ ॥ ೧೫ ॥

ಚರಸು ನಡೆದಾ ಭೂಮಿಪಾವನ ।
ಚರನವಾಣಿಯು ಹರನ ವಾಣಿಯು ।
ಚರನೆ ಲೋಕಕೆ ಪೂಜ್ಯವಸ್ತುವು ಬೇರೆ ಮತ್ತಿಲ್ಲ ॥
ಹರನೆ ಘನಲೋಕೋಪಕಾರಕೆ ।
ನರನ ರೂಪವ ಧರಿಸಿ ಧರೆಯೊಳು ।
ಚರಿಸುವನು ಚರನಾಕೃಪವ ಪಡೆದವನೆ ಘನಧನ್ಯಂ ॥ ೧೬ ॥

ವಿನುತ ಭಕ್ತರೆ ಭಕ್ತಿಯಿಂದಲಿ ।
ತನುಮನವ ಧನವಿತ್ತು ಸೇವೆಯ ।
ನನುದಿನದಿ ಚರತತಿಗೆ ಗೈಯುವುದಿದುವೆ ಶಿವಭಕ್ತಿ ॥
ಚರರ ಜರೆಯುತ ನಿಂದಿಸುತ ಲೀ ।
ಧರೆಯೊಳಗೆ ಜೀವಿಸುವ ಮಾನವ ।
ರರರೆ ನಾಯಕ ನರಕದೊಳು ತೊಳಲುವರೆನಿತೊ ಕಾಲ ॥ ೧೭ ॥

ಚರನ ಭಕ್ತಿಯ ಮರೆಯಬೇಡಿರಿ ।
ಚರನೆ ಸಾಕ್ಷಾತ್ ಹರನೆನುತಲರಿ ।
ಯಿರಿ ಸುಚರನಾಭಕ್ತಿಗೀ ಧರೆಯೊಳಗೆ ಸಾಟಿಲ್ಲ ॥
ಚರರ ಸತತಂ ತೃಪ್ತಿಬಡಿಸುವ ।
ದಿರದೆ ಚರನಂ ತೃಪ್ತಿಬಡಿಸಲು ।
ಧರೆಯೊಳಗೆ ಪುರಹರನ ತೃಪ್ತಿಯ ಪಡಿಸಿದೋಲಹುದು ॥ ೧೮ ॥

ಚರನು ಬೇಡಲು ಮಗಳ ಮುಡಿಯಂ ।
ಇರದೆ ಯಿತ್ತನು ಮಾನಕಂಜರ ।
ತರುಣಿಯಿತ್ತನು ಸಿಂಧು ಬಲ್ಲಾಳರಸ ಕಲಿಕಂಭ ॥
ಚರನ ವೇಷಕೆ ನಿಂದಿಸಿದತ ।
ತ್ತರುಣಿಯನುತಾ ತರಿದನಿವರನು ।
ಮರೆಯದಿರಿ ಚರಭಕ್ತರನು ನೀವ್ ಸ್ಮರಿಸಿರ್ದ್ದಗಲಿರುಳು ॥ ೧೯ ॥

ಭಸಿತ ಮಹಿಮೆಯ ಪೇಳ್ವೆದಾರಿಗು ।
ವಶವೆಪನ್ನಗ ರಾಜಗರಿದೆನ ।
ಉಸುರಲಾನೆನಿತರವಸುಮಶರಹರನು ಧರಿಸುವುದೈ ॥
ಪೆಸರುಗೊಳಲಾ ಭೂತಿಸಂತತ ।
ನಸಿವುದದುಭವ ಸಿದ್ಧಿ ಸಂಪದ ।
ವಿಸರವೆಲ್ಲಕೆ ಮೂಲವೆನಿಸುವ ಭೂತಿತಾನಾಗಿ ॥ ೨೦ ॥

ಪರಮ ಪಾವನವಿದಕೆ ಧರೆಯೊಳು ।
ಸರಿಯದಾವುದು ಅಜನ ದುರ್ಘಟ ।
ಬರಹಕೆಡಿಪುದು ತನುಕರಣತತಿ ವಿಮಲವೆನಿಸುವುದು ॥
ಕರುಣಮನ ಕೂಡಿಸುತ ಸಂಪ ।
ತ್ಕರವನೀವುದು ಶ್ರೀವಿಭೂತಿಯು ।
ನಿರುತದಲಿಯಣಿಮಾದಿ ಸಿದ್ಧಿಗಳೊಲಿದು ಕೂಡುವವು ॥ ೨೧ ॥

ದೇವಮುನಿ ಸುರರಾಕ್ಷಸಾದಿಯು ।
ಜೀವಮೊದಲಾಗಿಹವಿದೆಲ್ಲಕೆ ।
ಶ್ರೀ ವಿಭೂತಿಯು ಸುಪ್ರತಿಷ್ಠೆಯನಿತ್ತು ಪಾಲಿಪುದು ॥
ಆವಕಾಲದಲಾವ ತಲದಲಿ ।
ಪಾವನತೆಯಂ ಗೈವುದಿದುವೇ ।
ಸಾವಧಾನದಿ ಧರೆಗೆ ಕಾರಣಪೂರ್ಣವೈ ನಿಜವು ॥ ೨೨ ॥

ಭೂತಪತಿಯಾ ಪಂಚಮುಖದಿಂ ।
ಜಾತಸುರಭಿಸುಶೀಲೆ ಸುಮನೆಯು ।
ಖ್ಯಾತನಂದೆಯು ಭದ್ರೆಗೋಮಯದಿಂದಲಾ ಭಸ್ಮ ॥
ಭೂತಿಭಸಿತಂ ಕ್ಷಾರರಕ್ಷಗ ।
ಳೋತುಮಿವು ಪಂಚೊಗೆದವ್ಯೆಗುಣ ।
ಪೂತಸದ್ಗತಿ ಪ್ರೀತಸತ್ಕುಲ ಜಾತಭಕ್ತರಿರಾ ॥ ೨೩ ॥

ಧರಿಸಲಿಕೆಯ್ಶೆಸಿರಿಯು ತೇಜವು ।
ದುರಿತ ಭಸ್ಮಂ ಭಸ್ಮದಿಂ ದು ।
ರ್ಧರ ಮರಣವಿಲ್ ಕ್ಷಾರದಿಂ ಮರಭೂತಪಸ್ಮಾರ ॥
ಗರಳಭಯವುರಗಾದಿ ರಕ್ಕಸ ।
ಠಿ ಭಯಾಹರರಕ್ಷೆಯಂದಂ ।
ಪರಮ ಗಣಪದವಿಯದು ದೊರೆವುದು ನಿರುತವೇನೆಂಬೆ ॥೨೪॥

ಗುರುವೆ ಭಸಿತದ ಮಹಿಮೆಯರಿದೆವು ।
ಮಿರದೆ ರುದ್ರಾಕ್ಷಿಯ ಮಹಿಮೆಯನು ।
ಕರುಣಿಸುತ ವಿಸ್ತರಿಸು ಪುಣ್ಯಾಧಾರ ಭವದೂರ ॥
ಶರಣ ಸಜ್ಜನ ಬಂಧುತ್ರ್ಯೆಮಲ ।
ಹರಣ ಸದ್ದಯ ಕರುಣ ಸುಸ್ಥಿರ ।
ಶರಣು ಶರಣೆಂದೆರಗಿದರು ಸಾಷ್ಟಾಂಗ ಸಮ್ಮುಖದಿ ॥ ೨೫ ॥

ಚಾರು ರುದ್ರಾಕ್ಷಿಯ ಮಹಿಮೆಯಂ ।
ಸಾರಲಾಫಣಿರಾಜನಿಂದಂ ।
ತೀರಲಾಗದು ಪೇಳ್ವೆನೆಂದರೆ ಮೀರಿ ಮೆರೆಯುವದು ॥
ಭೂರಿದೃಗುಮಣಿ ಮಹಿಮೆ ಘನವಿದು ।
ಸಾರಲೆನ್ನಯ ವಶವದಲ್ಲವು ।
ಸಾರುವೆನು ಸದ್ಭಕ್ತನಿಕರವೆ ಕೇಳಿ ಭಕ್ತಿಯಲಿ ॥ ೨೬ ॥

ನೋಡಿ ಶಿವ ಸಾಕ್ಷಿಯೆನು ಸ್ಪರ್ಶನ ।
ಮಾಡಿದಿಗೆ ನಲಿದಾಡೆ ಭಕ್ತಿಯು ।
ಗೂಡೆ ಘನಕೊಂಡಾಡಿ ಪ್ರೇಮದಿಪಾಡಿ ಪೂಜೆಯನು ॥
ಮಾಡಿ ಮುದದಿಂದಾ ಶರೀರದಿ ।
ಸೂಡಿ ಚರಿಪರ ದುರಿತಕಿತ್ತೀ ।
ಡಾಡಿ ಸತತಂ ಬೇಡಿದುದ ಕೈಗೂಡಿಸುತ್ತಿಹುದು ॥ ೨೭ ॥

ಮದನಹರನಾ ತ್ರಿಪುರ ಸಂಹಾ ।
ರದ ಸುಕಾಲಕೆ ಹರನ ಕಣ್ಣಿಂ ।
ದ್ಯೆದೆ ಪುಟ್ಟಿದಕಾರಣದೆ ರುದ್ರಾಕ್ಷಿಯೆಂದೆಸುತ ॥
ವಿದಿತವಹ ಪೆಸರಾಯ್ತುಮಿದನುಂ ।
ಪದುಳದಿಂದಂ ಯೆನಿತೋ ಕಾಲದೆ ।
ಸದಯ ಸುರಮುನಿ ನಿಕರವದು ಧರಿಸುತ್ತ ಸುಖವಡೆದರ್ ॥ ೨೮ ॥

ಜಾರೆ ರುದ್ರಾಕ್ಷಿಯನು ರಟ್ಟೆಗೆ ।
ಸೇರಿಸುತ ಜಾರನೊಳು ಸಂಗವ ।
ಪೂಡಿಸುತಲಿರೆ ಪತಿಯು ಕಂಡುಭಯರನು ಕೊಲ್ಲಲಿಕೆ ॥
ಸೂರೆಗೊಂಡರು ಗಣಪದವನಾ ।
ಕೇರಳಾಧಿಪ ಸತಿಧರಿಸಿ ತಂ ।
ನರಮಣನ ಕುವಿಕಾರ ಬಿಡಿಸುತ ರುದ್ರಪದವಾಂತರ್ ॥ ೨೯ ॥

ಅನುನಯದಿ ಗುರುಲಿಂಗಜಂಗಮು ।
ಸನುತ ಭೂತಿಯು ರುದ್ರಮಣಿಗಳ ।
ಘನತೆಯನು ವಿಸ ರಿಸಿ ಪೇಳಿದೆ ನಾನು ಶಿವಮಂತ್ರ ॥
ವಿನಯಭಾವದಿ ಸ್ಮರಿಸಿ ಮುಕ್ತಿಯು ।
ನನುಭವಿಸುವುದರಾ ಮಹಿಮೆಯುಂ ।
ವಿನಯದಿಂ ಪೇಳುವೆನು ಕೇಳಿರಿ ಮುದದಿ ಮನವಿಟ್ಟು ॥ ೩೦ ॥

ಪರಮಮಂತ್ರದ ಮಹಿಮೆಯಿಂ ತಾ |
ನೊರಸಿಪೋಪುದು ಬ್ರಹ್ಮಲಿಖಿತವು |
ಗರಳ ಸೇವಿಸಲಮೃತ ಪರಿಯಾಗುತ್ತದಳ್ಳುರಿಯು ||
ವರಜಲದ ತೆರ ತಣ್ಣಗಹುದಾ |
ದುರುಳ ಸರ್ಪವು ಸರವಿಯಹುದಾ |
ಕರಡಿಪುಲಿ ಗೋಕರುವಿನಂತಾಗುವವು ನಿಶ್ಚಯವು || ೨೦ ||

ಕುಪಿತಶಾಪಟ್ಯವನು ಕೆಡಿಸುತ |
ಸುಪಥದಲಿ ನಿಲಿಸುವುದು ಸಂತತ |
ವಿಪುಲಧನಧಾನ್ಯಾದಿ ಸಂಪದವೆಲ್ಲ ಲಭಿಸುವುದು ||
ಗುಪಿತಮಂತ್ರದ ಮಹಿಮೆಯಿದು ಘನ |
ತಪಕೆ ತಲೆಮಣಿಯಾಗಿ ಮೆರೆವುದು |
ಸಫಲಗೈವುದು ಜನ್ಮ ಜಪಿಸಲು ಪರಕೆ ಪರವಹುದು || ೨೧ ||

ತನುವದಂಡಿಸಬೇಡ ವಾಸಿಪ |
ಮನೆಯುನಗಲಲು ಬೇಡ ಭ್ರಮೆಯಿಂ |
ವನವ ಸೇರಲುಬೇಡ ಚರಿಸುವ ಮನವ ಕಟ್ಟುತಲಿ ||
ಘನತರದ ಗುಹೆಗಿರಿಯುನಡರುತ |
ಗೆಣಸು ಗಡ್ಡೆಯ ಸೇವಿಸುತ ಬಲು |
ದಣಿಯದಿರು ಖೇನೊಮ್ಮೆ ಜಪಿಸಲು ಗತಿಯುತಾಸಾಧ್ಯಂ || ೨೨ ||

ಚರಪದೋದಕ ಭಸ್ಮವಂ ತಳೆ |
ದಿರದೆಯೊಕ್ಕುದ ಕೊಂಡು ಸುಸ್ಥಿರ |
ಶರಣ ಸಜ್ಜನಪದಸ ವಿನಯದಿ ನಮಿಸಿ ಮುದವೆತ್ತು ||
ವರಮನದಿ ಹರನಕ್ಷಮಾಲೆಯ |
ಧರಿಸಿ ನಿಜಚರವರರ ಪೂಜೆಯ |
ವಿರಚಿಸುತ ಲಿಂಗವನು ಭಜಿಪಂಗಿದುವೆ ಸಿದ್ಧಿಪುದು || ೨೩ ||

ಭುವನಗತವಾಗಿರ್ಪ ಮಂತ್ರದ ।
ನಿವಹವೆಲ್ಲವು ಸಂಜನಿಪುದಕೆ ।
ತವರೆನಿಪ ವಿಖ್ಯಾತಿಯನು ತವೆಪಡೆದು ಶೋಭಿಸುವ ॥
ಶಿವಷಡಕ್ಷರ ಮಂತ್ರವನು ಜಪಿ ।
ಸುವುದರಿಂ ವರವೀರಶೈವರು ।
ಶಿವಮಯರೆ ತಾವಾಗುವುದು ದಿಟವೆಂದು ನಂಬುವದೂ ॥ ೩೫ ॥

ಶಿವಮನನ ಸತ್ಯೇಂದ್ರ ಚೋಳನ ।
ಕುವರನಾದಾ ಮಂತ್ರ ಲಕ್ಷನು ।
ಶಿವಮನುವ ಜಪಿಸುತ್ತೆ ಖಡ್ಗದೆ ಕಡಿದುಕೊಳೆ ಶಿರವ ॥
ಭುವಿಗುರುಳುತದು ಮಂತ್ರವನು ಪಠಿ ।
ಸುವುದನುಳಿಯದೆ ತನ್ನ ಹಿಮೆಯುನು ।
ಭುವನದೊಳು ಬಿತ್ತರಿಸಿದಾ ಕಥೆ ನಿಮಗೆ ತಿಳಿಯದುದೇಂ ॥ ೩೬ ॥

ಮತ್ತೊರೆವೆ ಚರತೀರ್ಥ ಮಹಿಮೆಯ ।
ಚಿತ್ತಶುದ್ಧದಿ ಕೇಳಿ ಶಿವಭ ।
ಕ್ತೋತ್ತಮರೆ ನೀವ್ ಬಿಡದೆ ಸಲಿಸಲು ಮಾಯುರಾರೋಗ್ಯ ॥
ಸತ್ಯಮಿದು ಪುಸಿಯಲ್ಲ ಸಿದ್ಧವು ।
ಚಿತ್ರಜಾರಿಯ ಪದವು ದೊರೆವುದು ।
ಮೃತ್ಯುಜನನಾದಿಗಳು ನಶಿಪಪು ಮುಕ್ತಿ ಕರತಳವು ॥ ೩೭ ॥

ಲಿಂಗ ಚರಗುರು ಭಸಿತ ಹರನಯ ।
ನಂಗಳಾ ಶಿವಮಂತ್ರಮಿವುಗಳ ।
ತುಂಗಮಹಿಮೆಯನೊರೆದೆ ಬಲ್ಲನಿತಾನು ವಿವರದೊಳು ॥
ಅಂಗಜಾರಿಯ ರೂಪ ಚರವರ ।
ನಂಘ್ರಿಸಲಿಲದ ಮಹಿಮೆ ಪೇಳ್ವಡೆ ।
ತುಂಗಹರಿಅಜರಿಂಗಸಾಧ್ಯವು ತಿಳಿದನಿತು ಪೊರೆವೇಂ ॥ ೩೮ ॥

ಒಂದು ದಿನಪರವಾದಿಗಳು ನತ ।
ನಿಂದ ನುಡಿದರು ಕಾಶಿತೀರ್ಥ ।
ಕ್ಕಿಂದಮಧಿಕಿಲ್ಲೆಂದು ಶಾಸ್ತ್ರವನೋದುತಿರಲಾಗ ॥
ಇಂದುಧರನವತಾರ ಚರಪದ ।
ದಿಂದ ನಿರ್ಮಿತ ಪಾದತೀರ್ಥವು ।
ಎಂದಿಗೂ ಘನವಿರ್ಪುದೆಂದನು ಕಾಚಿರಾಜಯ್ಯ ॥ ೩೯ ॥

ಧರಣಿಯೊಳು ರಾಜಿಸುವ ಹಲವೆನಿ ।
ಸಿರುವ ತೀರ್ಥಗಳೊಳಮಾ ಭಾ ।
ಗೀರಥಿಯು ಘನವದಕೆ ಚರಪದ ತೀರ್ಥವಧಿಕೆಂದು ॥
ನೆರೆಯುತಿರಲಿತಿಹಾಸ ಪೌರಾ ।
ಣರಿದು ನೆರೆವಾದಿಸುವುದೇನಿದು ।
ತರವೆ ಎಂದುಂ ಖಂಡಿಸಿದ ಶ್ರೀ ಕಾಚಿರಾಚಯ್ಯ ॥ ೪೦ ॥

ನೋಳಿಗಯ್ಯನ ಮಂದಿರದಿ ಪೊಂ ।
ಜಾಳಿಗೆಯನಿಡೆ ಬಸವ ಮಹಿಮನು ।
ಕೇಳಿ ಚರರನ್ನೆಲ್ಲ ಬರಿಸುತ ಕಟ್ಟಿಗೆಯ ಹೊರೆಗೆ ॥
ಧೂಳಪಾದೋದಕವ ಸಿಂಚಿಸಿ ।
ಮೇಲು ಚಿನ್ನದ ಕೋಲುಗೈಯುತ ।
ಶೂಲಿಚರಕಿತ್ತಾಗ ಮೆರೆದನು ಕೇಳಿ ಭಕ್ತರಿರಾ ॥ ೪೧ ॥

ಕೇಳಿ ನೀವ್ ಸುಪ್ರಸಾದ ಮಹಿಮೆಯ ।
ಪೇಳಲೆನ್ನಳವಲ್ಲ ಸದ್ಗುಣ ।
ಶೀಲಶಿವಶರಣಾಳಿಗಳಿಗಿದು ಸಾಧ್ಯಸಂವೇದ್ಯ ॥
ಮೂಲಕರ್ಮದ ಜಾಲಹರಿಸುತ ।
ನೀಲಕಂಠನ ಮೇಲುಪದಕನು ।
ಕೋಲಗೈಯುತ ಪಾಲಿಪುದು ಮನವೋದದಿಂ ಸಲಿಸಿ ॥ ೪೨ ॥

ಭೋಗದೊಡಲೊಳಿ ಶಿವಸುಖಮನಿರ ।
ದಾಗಿಸುತೆ ಗುರುಲಿಂಗ ಜಂಗಮ ।
ಭೋಗದುಪಭೋಗ ಪ್ರಸಾದವು ವೀರಶೈವರೊಳು ।
ಆಗು ಹೋಗುಗಳಳಲನೆಲ್ಲವ ।
ನೀಗಿ ಜೀವನ್ಮುಕ್ತರನೆ ತಾ ।
ನಾಗಿಸುವುದಿನ್ನೇನೊರೆವೆನದರ ಪ್ರಭಾವವನು ॥ ೪೩ ॥

ಬಿಬ್ಬಿ ಬಾಚರಸನನು ಸುಭಕ್ತಿಯೊ ।
ಳುಬ್ಬಿ ಜಂಗಮದ ಪ್ರಸಾದವ ।
ಹಬ್ಬಿದೊಲವಿಂ ಕೊಳ್ವುದನು ದೂಷಿಸುವರಾಲಯುದೆ ॥
ಹಬ್ಬಿದುರಿಯನು ಕಂಡು ಗರ್ವದ ।
ಮಬ್ಬನುಳಿದು ಕ್ಷಮೆಯ ಪಡೆದರು ।
ತಬ್ಬಿಕೊಂಡಾಭಕ್ತನಾ ನಿಂದಕರು ಜಗವರಿಯೆ ॥ ೪೪ ॥

ಗುರು ಸುಲಿಂಗ ಸುಚರಭಸಿತ ಮಂ ।
ತ್ರರು ಚರನ ಚರಣೋದಕಂ ಘನ ।
ಹರನಯನ ಸುಪ್ರಸಾದವಾವರಣಷ್ಟಮಿವು ನಂಬಿ ॥
ಹರುಷದಿಂ ತನುಮನ ಧನವನಿ ।
ತ್ತಿರದೆ ಧರಿಸುತ ಸ್ಮರಿಸಿ ಸೇವಿಪ ।
ನರಗೆ ಮೋಕ್ಷವು ಸತಿಸುತರು ಸಿರಿದೊರೆವುದಿದು ಸತ್ಯ ॥ ೪೫ ॥

ಉಚಿತದಷ್ಟಾವರಣವೇ ತನು ।
ನಿಚಯ ಪಂಚಾಚಾರ ಪ್ರಾಣಂ ।
ಪ್ರಚುರವಾಗಿಹ ವೀರಶೈವಗರ್ಾವರಣವಿದರ್ು॥
ಸಚಲ ಪಂಚಾಚಾರವಿರದಿರೆ ।
ಕಚಸಮೂಹವದಿರದ ಶಿರವದ ।
ನುಚಿತವಾಗಿಯು ತೋರುವಂದದಿ ಧರ್ಮನಿಷ್ಫಲವು ॥ ೪೬ ॥

ಇದು ಆಚಾರಂಗಳಿವರಂ ।
ಇದೆಯಾಚರಿಪುದನು ತಿಳಿಸುವೆ ।
ವೇದ್ಯಲಿಂಗಾಚಾರ ಪರತರದಾ ಸದಾಚಾರ ॥
ಸಾಧ್ಯ ಭೃತ್ಯಾಚಾರ ಶ್ರೀಯುತ ।
ಮಾದ ಪುನತರದಾಶಿವಾಚಾ ।
ರ್ಯದೆ ಸುಗುಣಾಚಾರ ಪಂಚಾಚಾರಮವು ಸಿದ್ಧಂ ॥ ೪೭ ॥

ಗುರುವಿನುನ್ನತ ಕರುಣವಾಂಕುರೆ ।
ಪರಮ ಲಿಂಗಾಂಗೈಕ್ಯ ಭಾವದಿ ।
ಪರಿಣಮಿಪ ಸದ್ಭಕ್ತ ಸ್ಥಾವರಲಿಂಗದೆಡೆ ಪೋಗಿ ॥
ಮರೆದು ನಮಿಸುವುದಿರಲಿ ಭಾವದಿ ।
ಸ್ಮರಿಸದಿರುತಿಹುದಿದುವೆ ಸಿದ್ಧಿಸ ।
ಲುರತರೋನ್ನತಮಾದ ಲಿಂಗಾಚಾರವೆನಿಸುವುದು ॥ ೪೮ ॥

ಪಿಡಿದ ಕಾಯಕ ಬಿಡದೆಯದರಿಂ ।
ದೊಡನೆ ಬಂದಪದಾರ್ಥವೆಲ್ಲವ ।
ಪಡೆಯೆ ಗುರುಚರಲಿಂಗ ಮುಖದಿಂ ನಡೆಸಿದಾಸೋಹ ॥
ವೃಡನ ಭಕ್ತಿಯ ಪಥಕೆ ಕುಂದುಂ ।
ತೊಡಕು ಬರದಂತಾಗೆ ವರ್ತಿಸಿ ।
ಧೃಡತರಂಬಲಿಯುತಲಿ ಕೊಡುತಿಹುದೇ ಸದಾಚಾರ ॥ ೪೯ ॥

ಸತ್ಯಗುರು ಚರಲಿಂಗ ಭಕ್ತರೆ ।
ಪೃಥ್ವಿಗಧಿಕರು ನಾನೆ ಕಿರಿಯನೆ ।
ನುತ್ತೆ ನಿರಹಂಭಾವದಲಿ ಭಯಭಕ್ತಿಯಿಂ ಕೂಡಿ ॥
ತತ್ತ್ವಕ ತನುಮನ ಧನಂಗಳ ।
ನಿತ್ತು ನೆರೆನಲವಿಂದ ವರ್ತಿಪ । ॥ ೫೦ ॥
ಚಿತ್ತಶುದ್ಧದ ಭಕ್ತಿಭೃತ್ಯಾಚಾರವೆನಿಸುವುದು

ಭಕ್ತರೊಳು ಕುಲವರಸದಾ ಸ ।
ದ್ಭಕ್ತರಿನಗತ್ಯಧಿಕರೆಂದಾ ।
ಭಕ್ತರಂ ತೃಪ್ತಿಸುತ ತಾನವರೊಕ್ಕುದಂ ಕೊಂಡು ॥
ಮುಕ್ತಿಗಾಶ್ರಯಮೆಂದು ತಾನತಿ ।
ಭಕ್ತಿಯಿಂ ಸ್ವೀಕರಿಸಿ ತಣಿವುದೆ ।
ಸತ್ಯ ಕೇಳಿದು ಶರಣರಾಚರಣೆಯ ಶಿವಾಚಾರ ॥ ೫೧ ॥

ಶಿವಶರಣ ಗುರುಲಿಂಗ ಜಂಗಮು ।
ಸುವಿಭಸುಮ ರುದ್ರಾಕ್ಷಿ ಮಂತ್ರಂ ।
ಶಿವಚರಾರ್ಯರ ಪಾದಜಲ ಸುಪ್ರಸಾದಗಳನಿಂದೆ ॥
ಅವನು ಮರವಿಂದೊಮ್ಮೆಯಾದರು ।
ಕಿವಿಯೊಳಂ ತಾ ಕೇಳದಿರ್ಪುದೆ ।
ಶಿವನ ಭಕ್ತಗೆ ಕಾರಣತ್ಯಧಿಕೀ ಗಣಾಚಾರ ॥ ೫೨ ॥

ಇಂತು ಪಂಚಾಚಾರ ಮಹಿಮೆಯ ।
ನಾಂತ ಅಷ್ಟಾವರಣದೊಳು ಮನ ।
ಶಾಂತದಿರಿಸುತಲಂತಕಾಂತಕ ಭಕ್ತಿಯಂ ನಡೆಸಿ ॥
ಕಾಂತೆಮುಕ್ತಿಯೊಳ್ರಮಿಪುದಕೆ ವರ ।
ಪಂಥ ಷಟುಸ್ಥಲ ಜ್ಞಾನಬೋಧೆಯ ।
ನಿಂತು ಪೇಳ್ವೆ ಸುಭಕ್ತರೇ ನೀವ್ ಕೇಳಿ ಭಕ್ತಿಯಲಿ ॥ ೫೩ ॥

ಅರಿಯೆ ಭಕ್ತಮಹೇಶ ಮೇಣ್ ।
ವರಪ್ರಸಾದಿಯು ಪ್ರಾಣಲಿಂಗಿಯು ।
ಶರಣನೈಕ್ಯಂಬಾರುಮೆಂಬಿವು ಸಿದ್ಧಮಾಗಿಹವು ॥
ನಿರುತಸಲೆಯಾಚಾರ ಗುರುಶಿವ ।
ಚರವರ ಸುಪ್ರಸಾದ ಮಹನಾ ।
ಮೆಂಬುರುತರೋನ್ನತದ ಲಿಂಗಾಂಗಗಳು ಷಡ್ವಿಧವು ॥ ೫೪ ॥

ಗುರುವುದೀಕ್ಷಾ ಕಾಲದೊಳು ತನ |
ಗೊರೆದ ತಿಳಿನಡೆಯಲ್ಲಿ ಶ್ರದ್ಧೆಯ |
ನಿರಿಸಿ ಸತ್ಕ್ರಿಯುಕಡೆ ಬಿಡದುದು ನನ್ನದೆಂಬುದನು ॥
ತೊರೆಯುತದ ಗುರುಲಿಂಗ ಜಂಗಮ |
ಚರಣಕರ್ಪಿಸಿ ತತ್ಪ್ರಸಾದವ |
ನುರುಮುದದೆ ಕೊಂಡಿರ್ಪುದೇ ಭಕ್ತಸ್ಥಲದ ಲಕ್ಷಣವು ॥ ೫೫ ॥

ತಿಳಿನಡೆಯೊಳಾಸ್ತಿಕ್ಯ ಬುದ್ಧಿಯು |
ಬೆಳೆಗೆ ಸತ್ಯದಯಾದಿ ಗುಣಗಳು |
ತಳೆದು ಲಿಂಗಾರ್ಚನೆಯನಿತ್ಯವ್ರತದೆ ನಿಷ್ಠೆಯನು ॥
ಬಲಗೊಳಿಸುತಂ ಪರರ ವಸ್ತುವ |
ನೆಳಸೆನೆಂಬಾ ಛಲದ ವೃತ್ತಿಗೆ |
ನೆಲೆವನೆಯು ತಾನೆನಿಸೆ ಮಾಹೇಶ್ವರನ ಲಕ್ಷಣವು ॥ ೫೬ ॥

ವಿಷಯ ಭೋಗವೆ ಹೇಯವೆಂದರಿ |
ದಸವು ಲಿಂಗಕ್ಕಿಂದ್ರಿಯಾಸ್ಯದೊ |
ಳೊಸೆದುತಾಂ ಗಂಧಾದಿ ವಿಷಯವನರ್ಪಿಸುತೆ ಬಳಿಕ |
ಲಸಿತ ತಲ್ಲಿಂಗ ಪ್ರಸಾದವ |
ನೆಸೆವ ತನ್ನವಧಾನ ಭಕ್ತಿಗೆ |
ವಶನೆನಿಸಿ ಭೋಗಿಸುವುದರಿಯೆ ಪ್ರಸಾದಿ ಲಕ್ಷಣವು ॥ ೫೭ ॥

ಪ್ರಾಣ ಕರಣಾದಿಗಳೊಳನಿಶಂ|
ನಾನು ನನ್ನದಿದೆಂಬ ಮೋಹವ |
ತಾನುಳಿದು ವರಲಿಂಗಮಯಮಖಿಳೆನುತ ತಾನರಿದು ॥
ಪ್ರಾಣರೂಪದ ಲಿಂಗದಮಳ |
ಧ್ಯಾನಪೂಜೆಯೊಳಿಟ್ಟ ನಿಶ್ಚಲ |
ಮಾನಸದೊಳಿರೆ ಪ್ರಾಣಲಿಂಗಿಸ್ಥಲದ ಲಕ್ಷಣವು ॥ ೫೮ ॥

ತನ್ನತನು ಕರಣಾದಿಗಳೊಳು ।
ತ್ಪನ್ನವಾಗಿರೆ ಲಿಂಗತೇಜವು ।
ದಿನ್ನಖಿಳ ವಿಷಯಂ ಪ್ರಸಾದದ ರೂಪವಾಂತಿರಲು ॥
ತನ್ನ ನಿಜಲಿಂಗ ಪ್ರಸಾದದೆ ।
ಜನ್ಯವಾದಾನಂದ ಭಕ್ತಿಯು ।
ಪುಣ್ಯಪದವಿಯೊಳಿರ್ಪುದೇ ಶರಣನ ಸುಲಕ್ಷಣವು ॥ ೫೯ ॥

ನಾನು ನೀನೆಂತೆಂಬ ಭೇದ ।
ಜ್ಞಾನವಡಗಲಭೇದದೊಳು ಮೇಣ್ ।
ತಾನೆನಿಪ ಪರತರ ಲಿಂಗವೆಂಬ ಶಿವಾನುಭಾವದೊಳು ॥
ತಾನಡಗಿ ಸಮರಸದ ಭಕ್ತಿಯು ।
ನೂನದಾನಂದದೊಳು ಬೆರೆದ ವಿ ।
ಧಾನವೇ ಕೊನೆಯೆನಿಸಿದೈಕ್ಯಸ್ಥಲದ ಲಕ್ಷಣವು ॥ ೬೦ ॥

ಚಾರು ಅಷ್ಟಾವರಣ ಪಂಚಾ ।
ಚಾರ ಷಟುಸ್ಥಲಗಳನು ಕ್ರಮದಿಂ ॥
ವೀರಶೈವನು ಆಚರಿಸಿ ಘನಮೋಕ್ಷ ಸಾಮ್ರಾಜ್ಯ ॥
ಸೂರೆಗೊಳ್ಳುವದು ಯೋಗ್ಯಮದರಿಂ ।
ಭೂರಿ ಹರುಷದೊಳಾಚರಿಸ ಸಲೆ ।
ಧಾರಿಣಿಯೊಳು ಕೃತಾರ್ಥರಾಗುವುದಸಮ ಭಕ್ತರಿರಾ ॥ ೬೧ ॥

ಪೆರಮತರದೀ ಯತಿಪುರಾಣವ ।
ನುರುಮುದದೊಳೋದುವರಿಗಂ ಪೇ ।
ಳ್ವರಿಗೆ ಆಲಿಸುವರಿಗೆ ಸದ್ಗುರು ಕೋರಿ ಸಿದ್ಧೇಶಂ ॥
ಚಿರತರಾಯುರರೋಗ್ಯವೈಸಿರಿ ।
ಪರಮ ವಿದ್ಯೆ ಸುಭಕ್ತಿ ಮೊದಲಾ ।
ಗಿರುವ ಸತ್ಫಲಗಳನು ಕರುಣಿಸುತಿರ್ಪನಿದು ದಿಟವು ॥ ೬೨ ॥

ಅಂತು ಸಂಧಿ ಹತ್ತಕ್ಕಂ ಪದನು ೪೮೭ ಕ್ಕಂ ಮಂಗಲಂ ಮಹಾ

ಶ್ರೀ ಶ್ರೀ ಶ್ರೀ

|| ಶ್ರೀಗುರು ಕೋರಿ ಸಿದ್ಧೇಶ್ವರಾಯನಮಃ ||



# ಹನ್ನೊಂದನೆಯ ಸಂಧಿ

ಸೂಚನೆ - ಭಕ್ತವರನಹ ರಾಜಸಾಯ್ಬಗೆ ।
ಮುಕ್ತಿಯಾಗುವ ಪಥವ ಬೋಧಿಸಿ ।
ವ್ಯಕ್ತವಾಗದ ಲಿಂಗಮಹಿಮೆಯ ತೋರ್ದ ಸಿದ್ಧೇಂದ್ರ ॥

ಶ್ರೀನಗಾತ್ಮಜ ಮುಖಸರೋಜಸು ।
ಭಾನು ಸುರವರ ನಮಿತಪದ ಗಜ ।
ದಾನವಾಂಬುಧಿ ಕುಂಭಸಂಭವ ಕನಕಗಿರಿವಾಸ ॥
ಧ್ಯಾನಮಾನ ಸಮಾಧಿ ಸುಗುಣಸು ।
ಜ್ಞಾನ ಮಂತ್ರಕಭೇದ್ಯ ಚಿತ್ಕಲ । ॥ ೧ ॥
ಜ್ಞಾನಲಿಂಗ ಸ್ವರೂಪ ಶ್ರೀಪರಮಾತ್ಮ ಸಲಹೆನ್ನ

ಆಲಿಸುತ ಗುರುಸಿದ್ಧ ಪೇಳಿದ ।
ಆಲಲಿತದಷ್ಟಾವರಣಗಳ ।
ಬಾಳಪರಿಯಂ ಸ್ತುತಿಸಿಯೆರಗುತ ಚರಣದ್ವಯಗಳಿಗೆ ॥
ಕೇಳಿದರು ಆಜ್ಞೆಯನು ತಮ್ಮಯ ।
ಮೂಲತಾಣಕೆ ತೆರಳಿ ಪೋಗಲು । ॥ ೨ ॥
ಲೀಲೆಯಿಂ ಅಪ್ಪಣೆಯ ಕೊಟ್ಟನು ನಿಖಿಲಭಕ್ತರಿಗೆ

ತೆರಳಿ ಪೋಗಲು ಶಿಷ್ಯನಿಕರವು ।
ಗುರುವರನ ಮಹಮಹಿಮೆ ಸ್ತುತಿಸುತ ।
ಇರುವ ಜಕ್ಕಪ್ಪಯ್ಯ ಸಿಂದಿಗೆಯವರು ಸಿದ್ಧನಿಗೆ ॥
ಎರಗಿ ಆಜ್ಞೆಯಗೊಳುತ ನಡೆದರು ।
ಪರಮ ಶಂಕ್ರಪ್ಪಯ್ಯ ಯರಗಲ್ ।
ಗುರುವರ ಶ್ರೀಸಿದ್ಧಯೋಗಿಗೆ ನಮಿಸಿ ಬೀಳ್ಕೊಂಡ ॥ ೩ ॥

ಇತ್ತ ಶ್ರೀಗುರು ಸಿದ್ಧನಾಥನು ।
ಮತ್ತೆ ಕೆಲದಿನವಿರ್ದು ಅಲ್ಲಿಯೆ ।
ಉತ್ತಮಾಗುಣ ಶಿಷ್ಯನಿಚಯಕೆ ಮಾಡ್ಧನಾಜ್ಞೆಯನು ॥
ನಿತ್ಯಬರುತಿಹ ಜನರ ವಿಸರಕೆ ।
ತೃಪ್ತಿಪಡಿಸಿರಿ ಅನ್ನಜಲದಿಂ ।
ದಿತ್ತನೇಮವ ಪೇಳಿ ನಡೆದನು ನಾಲ್ವರದ ಮಠಕೆ ॥ ೪ ॥

ಜವದಿ ವರನಾಲ್ವಾರ ಗ್ರಾಮಕೆ ।
ಶಿವನ ಸನ್ನಿಭ ಸಿದ್ಧನೈದಲು ।
ತವಕದಲಿ ಪುರಜನರು ಬಂದರು ಸ್ತ್ರೀಯರಿಂಗೂಡಿ ॥
ಅವನತಂ ಗೈದಾಗ ಶರಣಗೆ ।
ಸುವಿತ ವಿಷಯಗಳನ್ನು ವಚಿಸುತ ।
ತವಸುದರ್ಶನದಿಂದೆ ಸಫಲತೆಗೊಂಡೆವಾವೆಂದರ್ ॥ ೫ ॥

ದಿನದಿನಕೆ ಗುರುಮಹಿಮೆ ಜಗದೊಳು ।
ಘನತೆಪೊಂದುತಲಿರಲು ಭಕ್ತಾ ।
ಜನಸಮೂಹವು ನಡೆದು ಬರುತಿರೆ ಶ್ರದ್ಧಭಾವದಲಿ ॥
ಅನುನಯದಿ ಕೊಡುತಿಹನು ಅವರಾ ।
ಮನದ ಬಯಕೆಯ ಸಲಿಸಿ ಯತಿವರ ।
ಘನಮನದಿ ಮನ್ನಿಸುತಲಾಶೀರ್ವಾದಗೈಯುತಿಹ ॥ ೬ ॥

ಗ್ರಾಮದಿಹ ಪ್ರಮುಖಾದಿ ಜನಗಳು ।
ನೇಮಗೈದರು ವಂದು ಅಬ್ದದಿ ।
ಅಮಣೀಯಕವಾದ ಚೈತ್ರಮಾಸದಂತ್ಯದಲಿ ॥
ಸ್ವಾಮಿ ಶ್ರೀಗುರು ಕೋರಿ ಸಿದ್ಧಗೆ ।
ಪ್ರೇಮದಿಂ ಮೆರವಣಿಗೆಗೈಯ್ಯಲು ।
ಸಾಮಜಾ ಗಮನಿಯರ ಸಹಿತಂ ಜ್ಯೋತಿಗಳ ಪಿಡಿದು ॥ ೭ ॥

ಪರಮ ಚೈತ್ರದ ಮಾಸಕೃಷ್ಣದ ।
ಲಿರುವ ಅಷ್ಟಮಿ ತಿಥಿಯು ಕೂಡಿದ ।
ಪರಮ ದಿನದೊಳು ಆರುತಿಯುಚಯ ಗೂಡಿಸಂಭ್ರಮದಿ ॥
ಮೆರವಣಿಗಿ ಮಹವಿಭವದಿಂದಲಿ ।
ಜರುಗಿ ಪಂಡಿತರ್ಸಮ ಪ್ರಮುಖರ ।
ವರಸಭೆಯು ನಡೆದಾಗ ಕಾರ್ಯಕ್ರಮವು ಪೂರ್ಣಾಯ್ತು ॥ ೮ ॥

ಸಂದ ಶ್ರೀನಾಲ್ವಾರ ಗ್ರಾಮವ ।
ದಂದು ಘನತರ ವಿಭವದಿಂದಿರೆ ।
ಮಂದಿಗಳು ಆಗಣಿತವು ನೆರೆಯುತ ಭಕ್ತಿಮನದಿಂದ ॥
ತಂದೆ ಶ್ರೀಗುರು ಸಿದ್ಧನಾಥಗೆ ।
ವಂದಿಸುತ ತಮ್ಮನದಭೀಷ್ಟವ ।
ಪೊಂದಿಸಂತೋಷದಲಿ ಪೋಪರು ತಮ್ಮ ನಿಜಪುರಕೆ ॥ ೯ ॥

ಬರುತಿಹರು ಬಹುದೂರ ಗ್ರಾಮದ ।
ಕುರುಡ ಹೆಳವವರು ಮೂಕಜನ ತಾ ।
ಅರಿಯದಾರಿಗೆ ರೋಗಗ್ರಸ್ತರು ಮರುಳು ಪಿಡಿದವರು ॥
ಪರಮ ಗುರುವರ ಕೋರಿ ಸಿದ್ಧನ ।
ಚರಣಕೆರಗುತ ತಮಗೆ ಇರುತಿಹ ।
ಪರಿಯ ಬೆಸಸಲು ನೋಡುತಾಗಳ್ ಪರಮಗುರುರಾಯ ॥ ೧೦ ॥

ಮೂಗರಿಗೆ ಮಾತುಗಳನಾಡಿಪ ।
ರೋಗಿಗಳಿಗಾರೋಗ್ಯ ಮಾಡುವ ।
ಸಾಗಲರಿಯದ ಹೆಳವರಿಗೆ ಕಾಲುಗಳನೀವ ಸಲೆ ।
ರಾಗರಹಿತನ ದರ್ಶನದೊಳುಂ ।
ಪೋಗುವವು ಮರುಳುಗಳು ಕುಣಿಯುತ ।
ಸೋಗೆಗಂಗಳೆಯರಿಗೆ ಈವನು ಪುತ್ರಸಂತಾನ ॥ ೧೧ ॥

ಪೇಳಲೇನದು ಸಿದ್ಧನಾಥನ ।
ಬಾಳಯಶ ಜಗವೆಲ್ಲ ತುಂಬಲು ।
ಭಾಳನೇತ್ರನು ಈತನೆಂದೇ ಪೊಗಳುತಿರೆ ಜನರು ॥
ಲೋಲ ಭೀಮಾನದಿಯ ತೀರದಿ ।
ಮೇಲುತರವಹ ಉರುಸುಗುಂಡಿಗಿ ।
ಆಲಯದಲಿರುತಿಹನು ಮುಸ್ಲೀಂ ಜಾತಪಂಡಿತನು ॥ ॥ ೧೨ ॥

ನಾಮದಲಿ ರಾಜೇಶನೆಂಬು ।
ದ್ದಾಮ ಬ್ರಹ್ಮಜ್ಞಾನನಿರತನು ।
ಸೋಮರೋಚಿಯ ತೆರದಿ ಶಾಂತೀಧಾಮ ಗುಣಯುತನು ॥
ಕಾಮನುರುವಣಿ ದೂರಿಳರಿಸುತ ।
ಪ್ರೇಮಸಂತರ ಕೂಡೆಯಿರುತಂ ।
ಕಾಮಹರನಧ್ಯಾನ ಪರವಶದಲ್ಲಿ ಇರುತಿಹನು ॥ ೧೩ ॥

ಇನಿತು ಸದ್ಗುಣದಿಂದೆ ಶೋಭಿಸಿ ।
ಮನುಜರೊಳು ಅತಿಕೀರ್ತಿಯುತನೆಂ ।
ದೆನಿಸಿಕೊಂಡಿಹ ರಾಜಸಾಹೇಬ್ ತನ್ನಮನದೊಳಗೆ ॥
ವಿನುತ ಸದ್ಗತಿಪೊಂದಲೋಸುಗ ।
ಅನಘ ಗುರುವರನೆಲ್ಲಿ ದೊರೆವನೊ ।
ಎನುತ ಚಿಂತಾತುರದೊಳಿರುತಿಹ ಪಗಲು ರಾತ್ರಿಯೊಳು ॥ ೧೪ ॥

ನೊಂದು ಕಳವಳದೊಳಗೆ ಇರುತಿರೆ ।
ಮುಂದುಗಾಣದೆ ತನ್ನ ಬಗಯಕಿಗೆ ।
ಎಂದು ಕಾಂಬೆನೊ ಗುರುಗಳಂ ಶಿವನೇ ಎನುತ್ತಿರ್ದಂ ॥
ಒಂದುದಿನ ಶುಭವಾರ್ತೆ ಕೇಳಿದ ।
ಚಂದದಾನಾಲ್ವಾರ ಪುರದೊಳು ।
ತಂದೆ ಶ್ರೀಗುರು ಕೋರಿ ಸಿದ್ದನು ಇರುವನೆಂತೆಂದು ॥ ೧೫ ॥

ಬರುತಿರುವ ಜನರುಗಳ ಮುಖದೊಳ ।
ಗಿರುವ ವಾಂಛಿತ ಪೂರ್ಣಗೊಳಿಸುತ ।
ಕರುಣದಿಂ ಪೊರೆಯುವನುಮಿಹಪರ ಪದವಿಗಳನಿತ್ತು ॥
ಪರಿಯನಿದನನು ಕೇಳ್ದು ತೋಷದಿ ।
ತೆರಳುವೆನು ನಾನಲ್ಲಿಗೆನುತಲಿ ।
ತ್ವರಿತದಿಂದಾ ರಾಜಾಸಾಹೆಬ್ ಪಯಣಕನುವಾದ ॥ ೧೬ ॥

ಕೂಡಿಕೊಳುತಲಿ ಸ್ನೇಹಮಂಡಲ ।
ಗಾಢಮಾದಾ ವಾದ್ಯರಭಸದಿ ।
ನೋಡಿದಾ ಜನ ಚಕಿತರಾಗುವ ತೆರದಿ ಹೊರವಂಟಾ ॥
ಆಡಲೇಂ ಬಹುತೀವ್ರಗತಿಯಲಿ ।
ಮಾಡುತಲಿ ಶಿವಭಜನವನು ಸಿರಿ ।
ಗೂಡಿ ಮೆರೆಯುವ ನಾಲವಾರದ ಪುರಕೆ ಹೊರಟಾಗಳ್ ॥ ೧೭ ॥

ಬಾಳವಾದ್ಯದ ರವವು ಹೆಚ್ಚಿರೆ ।
ಬಾಳಜನರಾವೃಂದಮಿಳಿತಿರೆ ।
ಬಾಳಜನದಾ ಕಲಕಲಾಟವು ಪೆರ್ಚಿಸುತ ಬರಲು ॥
ಬಾಳಮಂಜುಳುದಿರುವ ಮುತಕಾ ।
ಬಾಳಮುತಿರಾಜೇಶನೈದಲು ।
ಭಾಳದೃಗಸಮ ಕೋರಿ ಸಿದ್ಧನು ನೋಡಿ ಈ ಪರಿಯ ॥ ೧೮ ॥

ಯೇನಿದದ್ಭುತವೆಂದು ಗುರುವರ ।
ತಾನುಪರಿಸೀಲಿಸುತ ಕೇಳ್ದನು ।
ಮಾನನಿಧಿ ರಾಜೇಶ ನುಡಿದನು ಪದಕೆ ತಾ ನಮಿಸಿ ॥
ನಾನಿರುವೆ ಬಹುಭವದ ಜಾಲದಿ ।
ನೀನಿದನು ಛೇದಿಸುತ ಮನ್ಮದ ।
ಕಾನನವ ದಹಿಸುತಲಿ ಪೊರೆವುದು ದೇವನೀನೆಂದ ॥ ೧೯ ॥

ಆಲಿಸುತಲೀ ಲಪಿತ ಗುರುವರ ।
ಬಾಳನಿರವಸನಾಂತು ಮನದೊಳು ।
ಜಾಳುವ್ಯಕ್ತಿಯೇ ನೀನು ಈ ತಮೋಗುಣದ ಡಂಭವನು ॥
ತಾಳುತಲಿ ಗುರುಕರುಣ ಪಡೆಯಲು ।
ಕೇಳುವುದು ತರವಲ್ಲ ಇಲ್ಲಿಂ ।
ದೇಳು ಪಾಪಿಯೆ ನಿಲ್ಲಬೇಡವು ನಡೆಯೊ ಭರದಿಂದ ॥ ೨೦ ॥

ನಿಟಿಲದೃಗಸನ್ನಿಭ ಸುಯತಿವರ ।
ಘಟಿಸಿ ಈ ಪರಿ ಜಾಳಿಸುತ್ತಿರೆ ।
ಕುಟಿಲಹರ ರಾಜೇಶ ಮತ್ತೆಯು ಗುರುಪದವ ಪಿಡಿದು ॥
ಪಠಿಸುತಲಿ ಬಹುವಿಧದ ಸ್ತುತಿಗಳ ।
ಧಿಟನೆ ಯೆನ್ನಪರಾಧ ಕ್ಷಮಿಸುತ ।
ಶಠಮನವ ಮಾಡದಲೆ ರಕ್ಷಿಸುದಾತ ನೀನೆಂದ ॥ ೨೧ ॥

ಡಂಭತನವನು ಬೀರ್ದು ನೀಬಹು ।
ಜಂಭವನು ಪಸರಿಸುತ ಅವಿರಳ ।
ಗೊಂಬುಧಕೆ ನೀಬರುವುದುಚಿತವೆ ಮೂರ್ಖತನದಿಂದ ॥
ಇಂಬುಗೊಳ್ಳದೆ ದಯವು ನಿನ್ನೊಳು ।
ಬಿಂಬಿಸದು ಮಮತೆಯುದು ಸರ್ವದ ।
ಸ್ತಂಭಿಸಲು ಬೇಡ್ನಡಿಯೊ ಮಠದಾ ಹೊರಬದಿಗೆಯೆಂದ ॥ ೨೨ ॥

ಜರಿದು ಗುರುವರ ದೂಡುತಿರೆ ಅವ ।
ಪೊರಬದಿಗೆ ಸಾರುತಲಿ ಮನದೊಳು ।
ಮರುಗಿದನು ರಾಜೇಶತಾ ಗೈದಪಕೃತಿಯ ನೆನೆದು ॥
ಧರಿಸಿಧೃತಿಯನು ಮತ್ತೆಹೃದಯದಿ ।
ಇರಿಸುವೆನು ಈ ಗಾತ್ರಸೇವದಿ ।
ಪರತರಂಗಳ ಕಸವ ಗುಡಿಸಾ ಕಾರ್ಯಕೈಕೊಂಡು ॥ ೨೩ ॥

ಬಂದಿರುವ ಸಂಗಡಿಗ ಜನರಾ ।
ಸಂದಣಿಯು ಕಳುಹಿದನು ಹಿಂದಕೆ ।
ಚಂದಿರಾನಿಭ ರಾಜಸಾಹೇಬ್ ಶುದ್ಧಮನದಿಂದ ॥
ಚಂದದಿಹ ಗುರುಮಠದ ಅಂಗಳ ।
ನೊಂದುಕೊಳ್ಳದೆ ಮನದೆ ಪ್ರತಿದಿನ ।
ಬಂದುಕಸಗೂಡಿಸುವ ಬೇಸರವಿನಿತು ಇಲ್ಲದಲೆ ॥ ॥ ೨೪ ॥

ಅನುನಯದಿ ರಾಜೇಶಭಕ್ತನು ।
ದಿನವು ತಪ್ಪದೆ ಸೇವನಡೆಸಿರೆ ।
ಮನವ ನೋಡಲಿಬೇಕು ಎನುತಲಿ ಸಿದ್ಧಗುರುರಾಯ ॥
ಘನಮುನಿಸು ತಾಳ್ದಂತೆ ನಟಿಸುತ ।
ದಿನಗನಿವಸೆಂದ್ಹಿಡಿದು ಅಟ್ಟುತ ।
ತನ್ನ ಮಠದಾ ಹೊರಗಿರುವ ಹೊಲದಲ್ಲಿ ಹಾಕಿದನು ॥ ೨೫ ॥

ಹಾಕಿದನು ಗುರುನಾಥ ಶಿಷ್ಯನ ।
ಏಕಧೃತಿಯನು ನೋಡಲೋಸುಗ ।
ಹಾಕಿದುದು ಮುಸ್ಲೀಮು ಜಾತಿಯ ಜನರಮನಕಾಗಳ್ ॥
ಕಾಕಬಳಗದ ತೆರದಿ ಕೂಡುತ ।
ಶೋಕಹರ ಮುರುಗೇಂದ್ರನಾಲಯ ।
ನೂಕಿ ಕೆಡವಿದರಾಗ ತಾವ್ ಬಹುಕೋಪ ದುರಬೆಯಲಿ ॥ ೨೬ ॥

ಪುರಜನರು ಸರ್ವತ್ರ ಕೂಡಿಯೆ ।
ಗುರುವಿನಲ್ಲಿಗೆ ಬಂದು ನಮಿಸುತ ।
ಪರಮನೇ ಈಗೇನು ನಡೆದಿದೆ ಪೇಳುಯೆಂದೆನಲು ॥
ಹರುಷದಿಂ ನಗುತಾಗ ನುಡಿದನು ।
ಮರುಗಬೇಡಿರಿ ಅವರ ಫಲಗಳು ।
ದೊರೆಯುವವು ಈದಿನದಿ ನೋಡಿರಿಯೆಂದ ಸಿದ್ಧೇಂದ್ರ ॥ ೨೭ ॥

ಅನಿತರೊಳು ಇಸ್ಲಾಮು ವರ್ಗಕೆ ।
ಘನತರದ ಮಹಮ್ಮಾರಿ ಸೋಂಕಲು ।
ಮನೆಮನೆಗೆ ಮೃತವಾಗುತಿರ್ದರು ಪಾಂತಿಭ್ರಾಂತಿಯಲಿ ॥
ಎನಿತು ಪೇಳಲಿ ಅದ್ಭುತವನಾ ।
ದಿನದಿನಕೆ ಪೆರ್ಚುತಲಿ ಇರುತಿರೆ ।
ಕನಲುತ್ತೈದಿದರಾಗ ಸಿದ್ಧನ ಬಳಿಗೆ ವಿನಯದಲಿ ॥ ೨೮ ॥

ಗುರುವರ ಶ್ರೀಕೋರಿ ಸಿದ್ಧನ ।
ಚರಣಕಮಲಕೆ ಶಿರವಚಾಚುತ ।
ಎರಗಿ ಬಹುಪರಿ ಸ್ತುತಿಸಿನಿಂದರು ಕರಗಳಂ ಮುಗಿದು ॥
ಪರಮ ಪಾಪಿಗಳೆಮ್ಮ ಗುಣಗಳ ।
ನರಸದಲೆ ರಕ್ಷಿಪುದುಯೆಂದೆನೆ ।
ಕರುಣವೆರಸುತ ಶಾಂತಿತೋರ್ಪುದು ಪೋಗಿ ನೀವೆಂದ ॥ ೨೯ ॥

ಗುರುವರರು ಇಂತೆಂದು ಕಳಹಲು ।
ಉರುತರದ ಮಾರಿಕವು ನಿಲ್ಲಲು ।
ಹರುಷಗೊಳುತಲಿ ಗುರುಮಹಿಮೆ ಕೊಂಡಾಡುತಲಿ ಆಗ ॥
ತುರುಕರೆಲ್ಲರು ಕೂಡಿಮುದದಿಂ ।
ಬರುತ ಸಿದ್ಧಗೆ ಎರಗಿ ಕೆಡವಿದ ।
ಮುರುಗದೇವನ ಗುಡಿಯ ಕಟ್ಟಿದರಾಗ ಸೊಬಗಿನಲಿ ॥ ೩೦ ॥

ಇತ್ತ ಶ್ರೀವ್ಯಾಸದವರಿಗೆಯೂ ।
ನಿತ್ಯ ಎರಡೂವೇಳೆ ಅನ್ನವ ।
ನಿತ್ತು ರಕ್ಷಿಸೆ ರಾಜಸಾಹೇಬ್ ಹೊಲದಲೊರಗಿರಲು ॥
ಚಿತ್ತದ್ಧಿಡಿತವನೋಡಿ ಯತಿವರ ।
ಗೊತ್ತುಮಾಡಿದನೊಂದು ಕಟ್ಟಳೆ ।
ಪೊತ್ತು ಸ್ತ್ರೀವೇಷವನು ಚರಿಸೈ ಮೂರುವತ್ಸರವ ॥ ೩೧ ॥

ಗುರುಗಳ್ಪೇಳಿದ ಆಜ್ಞೆಯನು ತಾ ।
ಶಿರದೊಳಾನುತ ರಾಜಸಾಹೇಬ್ ।
ಧರಿಸಿದನು ತಾಶೀರೆ ಕುಪ್ಪಸ ಕಂಕಣಂಗಳನು ॥
ತರುಣಿಮಣಿಯಂಳ ತೆರದಿ ಧರೆಯೊಳು ।
ಚರಿಸುತಿರ್ದನು ನಿರ್ಭಯದಿ ತಾ ।
ಹರನ ಚರಣದ ಧ್ಯಾನಪರವಶನಾಗಿ ಭಕ್ತವರ ॥ ೩೨ ॥

ಮತ್ತೆ ಕೆಲದಿನ ಕಳೆದುಪೋಗಲು ।
ಸತ್ಯಯುತ ಶ್ರೀಶಾಲಿವಾಹನ ।
ಪೃಥ್ವಿಪಾಶಕ ಸಪ್ತದಶ ಐವತ್ತು ಏಳರೊಳು ॥
ಶೆತ್ತಿಸಿಹ ಯುವವತ್ಸರದಿತಾ ಕಳೆ ।
ವೆತ್ತ ಚೈತ್ರಮವಾಸ್ಯದಾ ಬಹು ।
ಉತ್ತಮಾ ಗುರುವಾಸರದ ಶುಭಸಂಧ್ಯಕಾಲದಲಿ ॥ ೩೩ ॥

ಮೇಲುಗುಣ ಸಂಪನ್ನೆ ಜೀವರಿಗಿ ।
ನೀಲಮನ ಗೃಹದಿಂದ ಜ್ಯೋತಿಯು ।
ಬಾಳವಾದ್ಯದ ರವವು ಬೀರುತ ಜನಚಯವು ಗೂಡಿ ॥
ಕಾಲಜಿತ ಶ್ರೀ ಕೋರಿ ಸಿದ್ಧನು ।
ಸಾಲು ಬಾಜೊರದಲಿ ಬರುತಿರೆ ।
ಮೇಳದಿಹ ಜನರನ್ನು ತೊರೆಯುತ ಬಂದಹೊರಬದಿಗೆ ॥ ೩೪ ॥

ಬಂದು ವಿಶ್ವಾಕರ್ಮ ವರ್ಗಕೆ ।
ಪೊಂದಿಹ ಗಣೇಶಪ್ಪನೆಂಬುವ ।
ನಿಂದ ನೀರನು ತರಿಸಿಕುಡಿದನು ನೋಡ್ದರಖಿಲ ಜನ ॥
ತಂದೆ ಶ್ರೀಗುರು ಕೋರಿ ಸಿದ್ಧನು ।
ಅಂದಗೆಡಿಸಿದ ನಮ್ಮ ಕುಲವನು ।
ಎಂದು ಗುಜುಗುಜು ಮಾತನಾಡ್ದರು ಪ್ರಮುಖ ಜನರುಗಳು ॥೩೫॥

ಈ ಪರಿಯ ದುಗುಡವನು ಮನದೊಳು ।
ಲೇಪಗೊಂಡಿಹ ಪ್ರಮುಖ ಜನಗಳು ।
ತಾಪಸೇಂದ್ರನ ಮಠಕೆ ಪೋದರು ವೈಭವದೆ ಗೂಡಿ ॥
ದೀಪಗಳ ಸಾಲಿರಿಸಿ ಮನದಿ ಪ್ರ ।
ಲಾಪಗೊಳ್ಳುತ ಸಂಶಯಂಗಳು ।
ರೂಪಿಸಿದವ್ಮೆ ಶಿವಮಠದ ಸಮುದಾಯಕರು ಅಂದು ॥ ॥೩೬॥

ಗುರುಗಳಾಜ್ಞೆಯ ಪೊಂದಿ ಸರ್ವರು ॥
ತೆರಳಿದರು ತಂತಮ್ಮ ಕುಟಿರಕೆ ।
ಇರುವನೇಮದ ಶರದಿಮಂಗಲ ಸ್ನಾನವಂ ಮಾಡಿ ॥
ವರಶಿವಾರ್ಚನೆ ಗೈಯುಲೋಸುಗ ।
ತೆರೆದು ಚೌಕದಿ ನೋಡುತಿರೆಯಾ ।
ವರದ ಇಷ್ಟಸುಲಿಂಗವಿರದಿರೆ ಬೆರಗುಗೊಂಡಾಗಳ್ ॥೩೭॥

ಒಬ್ಬರಲಿ ಲಿಂಗಿಲ್ಲವೆಂದು ಮ ।
ತ್ತೊಬ್ಬರನು ಕೇಳಲ್ಕೆ ಈ ಪರಿ ।
ಸಬ್ಬಜನಕಿರದಿರಲು ಲಿಂಗವು ವಿಸ್ಮಿತವಗೊಂಡು ॥
ಮಬ್ಬುನಮ್ಮಗೆ ಕವಿದು ಭೇದದಿ ।
ಒಬ್ಬದೇವೆಂದರಿಯದೇ ತನು ।
ಕೊಬ್ಬಿನಿಂ ಗುರುಸಿದ್ಧನಾ ತೆಗಳಿದ ಫಲವಿದೆಂದರ್ ॥೩೮॥

ಇದಕೆಯತ್ನವವದೇನು ಎನುತಲಿ ।
ವದಗಿ ಸರ್ವರು ಕೂಡಿಕೊಳುತಲಿ ।
ಮದನಮದಹರ ಕೋರಿಸಿದ್ಧನ ಬಳಿಗೆ ಸಾರುತಲಿ ॥
ಬೆದರಿವರ ಚರಣಗಳಿಗೆರಗುತ ।
ಪುನಿದು ಕಂಪವು ತೊದಲ ನುಡಿಧರು ।
ಸದಯ ಸದ್ಗುರು ರಕ್ಷಿಸೆಮ್ಮಯ ದುರ್ಗಣವನುರುಹಿ ॥ ೩೯ ॥

ಇಂತು ಪರಿಪರಿ ಸ್ತುತಿಸುತಿರ್ಪನಿ ।
ಶಾಂತಜನವೃಂದವನು ನೋಡುತ ।
ಶಾಂತ ಸದ್ಗುರು ಸಿದ್ಧ ಕೇಳಿದ ಮಧುರವಚನದಲಿ ॥
ಇಂತು ನಿಮ್ಮಗೆ ಬಂದ ಕಷ್ಟದ ।
ಅಂತು ತಿಳುಹಿರಿ ಎಂದುವುಸುರಲು ।
ನಿಂತು ಕರಗಳ ಮುಗಿದು ಪೇಳ್ದರು ತಮ್ಮ ಅಭಿಮತವ ॥ ೪೦ ॥

ಗುರುವರನೆ ನಮ್ಮಿಷ್ಟಲಿಂಗಗ ।
ಳ್ತೊರೆದು ಪೋಗಿವೆ ನಿಮ್ಮ ಮಹಿಮೆಯ ।
ಪರಮಪಾಮರರೇನು ಬಲ್ಲೆವುಯೆಂದು ಮಗುಳೆಂದರ್ ॥
ಮರುಳುಮತಿಗಳು ನಾವು ನಿಮ್ಮನು ।
ಜರಿದುದಕೆ ಈ ಪರಿಯು ಅಯಿತು ।
ಕರುಣದಿಂ ಲಿಂಗವನು ಕೊಡುತಲಿ ಪಾಲಿಸೈ ನೀನು ॥ ೪೧ ॥

ಭವಹರನು ಲಾಲಿಸುತ ನುಡಿದನು ।
ಭವಿಗಳೈನಾವ್ ನಮ್ಮ ಬಳಿಯಲಿ ।
ಶಿವನಸದೃಶದಲಿರುವ ಲಿಂಗವು ಎಂತುದೊರೆಯುವುದು ॥
ಅವನಿಯೊಳು ಕುಲಗೆಡುಕನಹನಿಗೆ ।
ಅವನತವ ನೀವ್ಗೈವುದುಚಿತವೆ ।
ಸುವಿತಪಥದೊಳ್ ನೀವು ಇರುವಿರಿ ಸುಮ್ಮನೋಗೆಂದ ॥ ೪೨ ॥

ವಿರಸದಿಂ ಸಿದ್ಧೇಂದ್ರ ಪೇಳಲು ।
ಪರಿಯರಿದು ಗದಗದನೆ ನಡುಗುತ ।
ಚರಣಕೆರಗಿಯೆ ಬೇಡಿಕೊಳೆ ಯತಿನುಡಿದ ಕರುಣದಲಿ ॥
ತೆರಳಿರೈ ನೀವ್ ನಿಮ್ಮಗೇಹಕೆ ।
ದೊರೆವವೈ ನಿಮ್ಮಿಷ್ಟಲಿಂಗಗಳ್ ।
ಗುರುವು ಹೀಗೆನೆ ಬಂದು ನೋಡ್ದರು ಇರಲು ಲಿಂಗಗಳು ॥ ೪೩ ॥

ನೋಡಿದರು ತಂತಮ್ಮ ಲಿಂಗವ ।
ಮಾಡಿಕೊಂಡರು ಪೂಜೆಭಕ್ತಿಲಿ ।
ಪಾಡಿದರು ಶ್ರೀ ಕೋರಿಸಿದ್ಧನ ಮಹಿಮೆ ಪರಿಪರಿಯೊಳ್ ॥
ನಾಡಜನರೀ ವಾರ್ತೆಕೇಳುತ ।
ನೋಡಬಂದರು ಪ್ರೇಮದಿಂದಲಿ ।
ನೀಡುತಲಿ ಮಸ್ತಕವ ಚರಣಕೆ ಬೇಡಿ ಬಯಕೆಗಳ ॥ ೪೪ ॥

ಹರಿ ಅಜಾನತ ಹರನಸನ್ನಿಭ ।
ಗುರುವರನ ಮಹಿಮೆ ಪ್ರಭೆಯದು ।
ಧರೆಯೊಳಗೆ ಪಸರಿಸುತಲಿರುತಿರೆ ಅಪರಿಮಿತವಾಗಿ ॥
ಭರದಿ ಬರುತಿಹ ಜನಸಮೂಹಕೆ ।
ಪೊರೆವ ಅವರವರಿಷ್ಟವೀಯುತ ।
ಇರುವನಾಲ್ವಾರ್ ಪುರವು ಮೆರೆದುದು ಶಿವಪುರವದೆನಿಸಿ ॥ ೪೫ ॥

ಪರಮತರದೀ ಯತಿಪುರಾಣವ ।
ನುರುಮುದದೊಳೋದುವರಿಗಂ ಪೇ ।
ಳ್ವರಿಗೆ ಆಲಿಸುವರಿಗೆ ಸದ್ಗುರು ಕೋರಿ ಸಿದ್ಧೇಶಂ ॥
ಚಿರತರಾಯುರರೋಗ್ಯವೈಸಿರಿ ।
ಪರಮ ವಿದ್ಯೆ ಸುಭಕ್ತಿ ಮೊದಲಾ ।
ಗಿರುವ ಸತ್ಫಲಗಳನು ಕರುಣಿಸುತಿರ್ಪನಿದು ದಿಟವು ॥ ೪೬ ॥

ಅಂತು ಸಂಧಿ ಹನ್ನೊಂದಕ್ಕಂ ಪದನು ೫೩೩ ಕ್ಕಂ
ಮಂಗಲಂ ಮಹಾ ಶ್ರೀ ಶ್ರೀ ಶ್ರೀ

॥ ಶ್ರೀಗುರು ಕೋರಿ ಸಿದ್ಧೇಶ್ವರಾಯನಮಃ ॥







## ಹನ್ನೆರಡನೆಯ ಸಂಧಿ

ಸೂಚನೆ ಸಾಧ್ವಿಮಣಿ ನೀಲಮ್ಮ ದೇವಿಗೆ ।
ಆದರದಿ ಸುತನನ್ನು ಕರುಣಿಸಿ ।
ವೇದಮೂಲವನರುಹಿದನು ಮಗು ರಾಜಸಾಹೆಬಗೆ ॥

ದಯಗುಣಿಗಳ್ದುಃಖಿಗಳ ಕಂಡತಿ ।
ದಯದಿ ಕಳವಳಿಸುತಲಿಯುವರನು ।
ನಯದಿ ಪೊರೆಯುತ್ತಿಹರು ಘನಸಂಸಾರ ದುಃಖದೊಳು ॥
ಲಯಸಿ ಶಿವನಿನ್ನನ್ನು ಪ್ರಾರ್ಥಿಸೆ ।
ಭಯವ ಬೇಡೆಂದೆನ್ನ ಪೊರೆಯದ ।
ನಿಯಮವೇಂ ಪರಿಪಾಲಿಸೈ ಶಿವಲಿಂಗ ಭವಭಂಗ ॥ ೧ ॥

ಒಂದುದಿನ ಗುರು ಸಿದ್ಧದೇವನು ।
ಬಂದ ನೀಲಮ್ಮನ ಸುಸದನಕೆ ।
ವಂದಿಸುತ ಬಹುಭಕ್ತಿಯಿಂದಲಿ ದಿವ್ಯಪೀಠದೊಳು ॥
ತಂದೆ ಶರಣನ ಕೂಡ್ರಿಸುತ ತಾ ।
ತಂದು ನೀಡ್ದಳು ಷಡ್ರಸಾನ್ನವ ।
ನಂದು ಭೋಜನ ಮಾಡುತಲಿ ತೃಪ್ತಿಯನು ಪೊಂದಿದನು ॥ ೨ ॥

ನಿಂದು ಕರಗಳ ಮುಗಿದು ಸಾಧ್ವಿಯು ।
ವಂದಿಸುತತಾ ಬೇಡಿಕೊಂಡಳು ।
ಕಂದರಿಲ್ಲದೆ ಬಳಲುತಿರುವೆನು ಗುರವೆ ಚಿತ್ತೈಸು ॥
ಮಂದಗಮನೆಯು ಇಂತುನುಡಿಯಲು ।
ನಂದನಾಗುವ ಮಗಳೆ ಕೇಳೌ ।
ನೊಂದುಕೊಳಬೇಡೌ ಸುಹೃದಯದಿ ಪೇಳ್ವೆನಿದಕೆಂದ ॥ ೩ ॥

ನಿನ್ನ ಉದರದಿ ಜನಿಸಿ ಬರುವನು ।
ಎನ್ನಗುರು ಮಲ್ಲಪ್ಪ ತಾತನು ।
ಇನ್ನಿದಕೆ ಸಂಶಯವು ಕಿಂಚಿತ್ತಿಲ್ಲ ಮತ್ತೆಂದ ॥
ಪನ್ನಗಾಕಚೆ ಕೇಳು ನೀನಾ ।
ಚೆನ್ನೆಸೆವ ಕಾಖಂಡಿ ಪುರಕಂ ।
ಇನ್ನು ಪೋಗೌ ಪರಮತರ ವೈಶಾಖವದ್ಯದಲಿ ॥ ೪ ॥

ಭಾವಭವಮದದೂರ ಯತಿಪನು ।
ಈ ವಿಧದ ಆಜ್ಞೆಯನು ಮಾಡಲು ।
ಜೀವರಿಗಿ ನೀಲಾಂಬೆ ಮನ ಮುದವನೆಲೆಗೊಳಿಸಿ ॥
ಭುವಿಯೊಳುಂ ಶುಚಿಸ್ಥಲವು ಎನಿಸಿದ ।
ಪಾವನದ ಕಾಖಂಡಿ ಗ್ರಾಮಕೆ ।
ಕಾವಗುರು ಮಲ್ಲಪ್ಪನೆಡೆಗೈತಂದಳಾ ಅಬಲೆ ॥ ೫ ॥

ಬೇಗೆದೃಗಸಮ ಪೇಳ್ದ ಸುಮಿತಿಗೆ ।
ಸಾಗಿಬರುತಲಿ ಅರ್ಚನದ ವಿಧಿ ।
ಗಾಗಿ ತಂದಿಹ ತೆಂಗುಪೂನೈವೇದ್ಯ ಕರ್ಪುರದಿ ॥
ರಾಗದಿಂ ಪೂಜೆಯನು ಸಲಿಸುತ ।
ಸೋಗೆ ಲೋಚನೆನುತಿಸಿ ಬೇಡ್ದಳು ।
ಮೇಗೆನಿಪ ಪುತ್ರನನು ಕರುಣಿಸುಯೆಂದು ಭಕ್ತಿಯೊಳು ॥ ೬ ॥

ತರುಣಿಮಣಿ ನೀಲಮ್ಮದೇವಿಯು ।
ಹರಗಣಂಗಳ ವೃಂದಳರುತಾ ।
ತರಿಸಿ ಮಧುರಾಹಾರ ಸಂಗ್ರಹಪಾಕ ಮಾಡಿಸುತ ॥
ನೆರಸಿ ಶ್ರದ್ಧದಿ ಊಟಮಾಡಿಸಿ ।
ವರಸುತಾಂಬುಲ ದಕ್ಷಿಣೇಯುತ ।
ತಿರುಗಿಬಂದಳು ನಾಲ್ವರಕೆ ಬಹು ಹರುಷ ಮನದಿಂದ ॥ ೭ ॥

ಪುಲ್ಲಲೋಚನೆಯಾ ಸುನೀಲ ।
ಮ್ಮಲ್ಲಸದಿ ಬರುತಾಗ ಗುರುಪದ ।
ಪಲ್ಲವಕೆ ಯೆರಗುತಲಿ ಭಕ್ತೀಭಾವವನು ಗೂಡಿ ॥
ಎಲ್ಲ ಸಂಗತಿ ಅರುಹುತಿರೆ ಆ ।
ಸಲ್ಲಲಿತ ಗುರಸಿದ್ಧ ನುಡಿದನು ।
ನಿಲ್ಲುವನು ಗುರುನಿನ್ನ ಜಠರದಿ ಪೋಗು ನೀನೆಂದ ॥ ೮ ॥

ಗುರುಗಳಿಂತೆನೆ ಕೇಳ್ದು ಮನದೊಳು ।
ಹರುಷ ಭರದೊಳು ನಮಿಸಿ ನಡೆದಳು ।
ಹರನಸ್ಮರಣೆಯು ರಜನಿ ದಿವದೊಳು ಮಾಡುತಿರುತಿರಲು ॥
ತರುಣಿಗಾದಿನ ಮೊದಲು ಆಗಿಯೆ ।
ಧರಿಸಿದಳು ಗರ್ಭವನು ದಿನದಿನ ।
ಕಿರುವ ಅವಯುವ ಚಿನ್ಹ ಬದಲಾಗುತಲಿ ನಡೆಯುತಿರೆ ॥ ೯ ॥

ಸಣ್ಣನಡುವದು ಬೆಳೆಯಲಾಯಿತು ।
ಬಣ್ಣಶ್ವೇತದ ಛಾಯಬೀರಲು ।
ನುಣ್ಣಗಿಹ ಉರುಯೆದ್ದು ತೋರುತ ಚೂಚಕಸಿತಾಗೆ ॥
ತಣ್ಗದಿರಶೇಖರನ ಸಮನಹ ।
ಚಿಣ್ಣಗುಡು ಗರ್ಭದಲಿ ವಾಸಿಸೆ ।
ಬಣ್ಣಿಸಲ್ಕಳವಲ್ಲ ದೇವಿಯು ಸೌಂದರವ ಭುವಿಯೊಳ್ ॥ ೧೦ ॥

ನಾರಿಮಣಿ ನೀಲಮ್ಮ ದೇವಿಗೆ ।
ಪೂರನವಮಾಸಂಗಳಾಗಲು ।
ತೋರಿದವು ಬೇನೆಗಳು ನಡುಮೊದಲಾದ ಕರಣದಲಿ ॥
ಸಾರಿದಾಯ್ಗಳು ಪ್ರಸುತಗೊಳಿಸುತ ।
ಮಾರಸಮ ಶಿಶುವನ್ನು ಕಾಣುತ ।
ಬೀರಿದರು ವಾರ್ತೆಯನು ಹೊರಬದಿಗಿರುವ ಜನಗಳಿಗೆ ॥ ೧೧ ॥

ಗುರುವರಗೆ ಈ ವಾರ್ತೆ ತಿಳಿಸಲು ।
ಭರದಿ ಶಿಶುವಿನ ಪಿತನು ಬರುತಲಿ ।
ಚರಣಪದ್ಮಂಗಳಿಗೆ ಎರಗುತ ನುಡಿದ ವಿನಯದಲಿ ॥
ವರವು ನಿಮ್ಮದು ಸಫಲವಾಯಿತು ।
ತರುಳನುದಿಸಿದ ಸ್ವಪ್ರಕಾಶದ ।
ಲಿರುವನೆಂದುಸುರಲ್ಕೆ ಸಿದ್ಧನು ಹರುಷದಿಂ ನುಡಿದ ॥ ೧೨ ॥

ಕೊಡುವುದೈ ಈ ಶಿಶುವು ನಮ್ಮಗೆ ।
ಹಿಡಿಯದಲೆ ಸಂಶಯನ ನೀವ್ಗಳು ।
ನಡೆದು ಬಂದಿಹ ನಮ್ಮಗುರುಗಳು ನಿಮ್ಮವುದರದಲಿ ॥
ಬಿಡದೆ ಮತ್ತೊಬ್ಬಣುಗನನು ನಾಂ ।
ಕೊಡುತಿಹೆನು ತವವಂಶ ಬೆಳೆಯಲು ।
ನುಡಿಯ ಕೇಳುತವಪ್ಪಿಕೊಂಡನು ಪುನಃ ನಮಿಸುತಲಿ ॥ ೧೩ ॥

ದಿನಗಳಪ್ಪನ್ನೆರಡಾಗೆ ಶಿಶುವಿಗೆ ।
ಅನುನಯದಿ ಅಭಿಧಾನಗೈಯ್ಯಲು ।
ಅನುಗೊಳಿಸಿ ಷಡ್ರಸದ ಪಾಕಕೆ ವಿವಿಧ ಸಂಗ್ರಹವ ॥
ವಿನುತ ಹರಗುರು ಚರಸಮೂಹಕೆ ।
ಉಣಬಡಿಸಿ ದಕ್ಷಿಣೆಯನೀಯುತ ।
ವನಿತೆಮಣಿಯರುಗೂಡಿ ಶುಭಕರ ಜೋಗುಳವ ಪಾಡಿ ॥ ೧೪ ॥

ಶಿವನ ತೇಜವ ತಾಳಿ ಬಂದಿಹ ।
ಕುವರನಿಗೆ ತೊಟ್ಟಿಲದೊಳಿಡುತಲಿ ।
ಅವಿರಳಾನಂದನಿಗೆ ಪೆಸರನು ಇಡುವಕಾರಣಕೆ ॥
ಅವಸರದಿ ಬರುತಾಗ ಸಿದ್ಧಗೆ ।
ಅವನತಂಗ್ಯೆದಾಗ ಕೇಳ್ದರು ।
ಭವಹರನೆ ಶಿಶುವಿಗೆ ಪೆಸರು ಆವುದು ಇಡಲಿಬೇಕು ॥ ೧೫ ॥

ಲಾಲಿಸುತ ಶ್ರೀಕೋರಿ ಸಿದ್ಧನು ।
ಬಾಳಸಂತೋಷದಲಿ ನುಡಿದನು ।
ಲೀಲೆ ಜಗದಲಿ ತೋರಲೋಸುಗ ಗುರುವೆ ಬಂದಿಹನು ॥
ಶೀಲ ತೋಟಪ್ಪಯ್ಯನೆಂಬುವ ।
ಮೇಲುನಾಮವ ಇಡುವುದೆಂದೆನೆ ।
ಕೇಳಿ ಮೋದದಿ ಬಂದುಯಿಟ್ಟರು ಸಿದ್ಧನಾಜ್ಞೆಯಲಿ ॥ ೧೬ ॥

ಶಿಶುವು ತಾ ದಿನದಿನಕೆ ಬಾಲಾ ।
ಶಶಿಯವೋಲ್ ಬೆಳೆಯುತ್ತಲಿರುತಿರೆ ।
ವಿಷಮರೋಗದ ಸೋಂಕಯಿಲ್ಲದೆ ವೈಶ್ವನರನಂತೆ ॥
ಅಸಮ ಅಯ್ಯಾಚಾರ ಶಾಸ್ತ್ರದಿ ।
ಎಸೆವ ವಿಧಿತಾ ಹಿಡಿದು ಮಾಡುತ ।
ವೊಸೆದು ಬಾಲಗೆ ಅಕ್ಕರಂಗಳ ಕಲಿಸತೊಡಗಿದರು ॥ ೧೭ ॥

ಇತ್ತ ರಾಜಾಸಾಹೇಬ್ ಗುರುವರ ।
ನಿತ್ತನುಜ್ಞೆಯ ತೆರದಿ ಸ್ತ್ರೀರೂ ।
ಪೊತ್ತು ಧರೆಯಲಿ ತಿರುಗೆ ತೃತಿಯಾ ಅಬ್ದ ಪೂರ್ಣಗೆ ॥
ಸತ್ಯಯುತ ತಾ ಬಂದುನವ್ರುದಿ ।
ಪ್ರತ್ಯಗಾತ್ಮನ ಚರಣಕುರು ನಮಿ ।
ಸುತ್ತ ಕಂಪನಗೊಂಡುನಿಂದನು ಪಾಣಿದ್ವಯ ಮುಗಿದು ॥ ೧೮ ॥

ನೋಡಿದನು ಘನಭಕ್ತಿ ಗುರುವೂ ।
ಕಾಡಿದನು ರಾಜೇಶನೊಳು ತಾ ।
ಬೇಡಮುಗು ಭವಬಂಧಭಯವನು ನಾನುನಿನಗಿನ್ನು ॥
ಮಾಡುವೆನು ಅಪವರ್ಗದಿರವನು ।
ಜೋಡುಗೊಂಬುವ ಶಿರದಿಯೆನೆ ತಾ ।
ನೀಡಿದನು ಶಿವಮಂತ್ರವನು ಯುಗಳಕರ್ಣದ್ವಾರದಲಿ ॥ ೧೯ ॥

ಧನ್ಯನಾಗ್ಯೆ ನೀನು ಧರೆಯೊಳು ।
ಮಾನ್ಯನೆನಿಸುತ ಜಸವನೊಡೆದಿಹ ।
ಕನ್ಯಮುಕ್ತಾಂಗನೆಯ ವರಿಸುತ ಬಾಳುಯೆಂದ್ದುರಸಿ ॥
ಸನ್ನುತಾಗುರು ಶಿರದಿ ಶುಭಕರ।
ವನ್ನು ಸವರುತಲಿರಲು ರಾಜೇಶ್ ।
ತನ್ನಪಣೆಯನು ಚರಣದಿಡುತಲಿ ಮತ್ತೆವಚಿಸಿದನು ॥ ೨೦ ॥

ಪೇಳುಗುರುವರ ನೀನು ಯೆನಗಾ ।
ಮೇಲುಗತಿಯೆಂದೆನಿಪ ವೇದದ ।
ಮೂಲವನು ಬಹುವಿಧದ ಬೋಧದ ಸಾರಸಂಗತಿಯ ॥
ಪಾಲಿಪುದು ಮುಮುಹೃದಯದಿರುತಿಹ ।
ಕೀಳುತರ ಕಲ್ಮಷವ ನಶಿಸಲು ।
ಬಾಳಕೃಪೆಯನು ಇಟ್ಟು ಬೋಧಿಸುಯೆಂದು ಸಮಿಸಿದನು ॥ ೨೧ ॥

ವಂದಿಸುತ ಬಹುದೈನ್ಯದಿಂದಲಿ ।
ಬಂದು ನಿಂದಿಹ ರಾಜಸಾಹೇಬ್ ।
ಗಂದು ತೋಷದಿ ಸಿದ್ಧನುಡಿದನು ಕೇಳ್ಮಗನೆ ಎನುತ ॥
ಚಂದದಿಂ ತಿಳುಪುವೆನು ಸಹಜಾ ।
ನಂದಸಾರವ ವಿವರದಿಂದಲಿ ।
ಕಂದನೀ ಸಾಧಿಸಿದಡಾಗುವಿ ಪೂರ್ಣ ಪರಬೊಮ್ಮ ॥ ೨೨ ॥

ಸಹಜನಂದವದೆಂತು ಎಂದೊಡೆ ।
ಸಹಜವಾಗಿಹುದೆಲ್ಲ ಬ್ರಹ್ಮವು ।
ಸಹಜವಾಗಿಹುದೆಲ್ಲ ಜಗಪರಮಾತ್ಮನೇ ಆಗಿ ॥
ಸಹಜವಾಗಿಯೆ ತಾನೆ ಬೆಳಗುತ ।
ಸಹಜ ಸಂವಿತ್ತ್ರಾತ್ಮನಾಗಿಯೆ ।
ಸಹಜನಂದವದೆಂಬ ಪೆಸರಿದು ಬಂದಿತಿದಕೆಂಥ ॥ ೨೩ ॥

ನಂದನನೆ ಕೇಳ್ ಯೋಗಸಾಧನ ।
ಸಿಂಧುವಿನೊಳ್ಮುಳುಗಿರಲು ಪೂರ್ಣಾ ।
ನಂದವದು ತುಂಬುವದು ಬಾಹ್ಯಾಭ್ಯಂತರಾಳದಲಿ ॥
ಕಂದೆರೆಯಲಾರದಲೆ ಸುಖಲಹ ।
ರಿಂದ ದೃಗಗಳು ಬಗಿಯೆ ದೇಹವ ।
ದಂದುತೂಗ್ಯಾಡಲ್ಕೆ ಸಹಜಾನಂದವದು ಎಂದ ॥ ೨೪ ॥

ಮರೆದು ಸುಖದಾ ಸುರತಗಾತ್ರವು ।
ಅರಿಯದಲೆ ಪರವಶವು ಆದಂ ।
ತರದೆ ಅಪರೋಕ್ಷಾನುಭವವಾದದ್ವಯಾನಂದ ॥
ಭರಿತವಾಗಿಯೆ ಏನು ಅನ್ಯವ ।
ನರಿಯದಲೆ ವಿಸ್ಮೃತಿಯುವಡೆದಿರೆ ।
ಅರಿಯೆ ಸುಖಭಾವದುವೆ ಸಹಜಾನಂದ ಕೇಳೆಂದ ॥ ೨೫ ॥

ಇಂದ್ರಿಯಂಗಳು ಮನವು ಚಿತ್ತವು ।
ಇಂದ್ರನಂದದಿ ಮೆರೆವ ವಿಷಯದ ।
ಸಾಂದ್ರಗುಣ ಅಹಂಕಾರ ಬುದ್ಧಿಯು ತಾಪತೃತಿಯೆಗಳು ॥
ಮಂದಕಾಮುಕ್ರೋಧ ಮೋಹಗ ।
ಳಿಂದ ಪಾತಕದಷ್ಟಮದಗಳು ।
ವಂದುಕಾಣದೆ ಸುಖವು ಇರುತಿರೆ ಸಹಜನಂದೆಂದ ॥ ೨೬ ॥

ಯೋಗದೊಳು ಆನಂದವಿರ್ಪುದು ।
ಯೋಗ ಆನಂದೆನಿಸಿ ಕರೆವುದು ।
ಯೋಗವದು ನಿಲ್ಲಲ್ಕೆ ಸಹಜಾನಂದವೆನಿಸಿಹುದು ॥
ಯೋಗಿಗಳು ಆ ಸಹಜನಂದದಿ ।
ಮೂಗರಂದದಿ ತಿರುಗುತಿರ್ಪರು ।
ಯೋಗಿಗಳನೇನೇಳ್ವೆ ಸಹಜಾನಂದ ಮೂರ್ತಿಗಳು ॥೨೭॥

ಭರತವೃಷಭನು ಅತ್ರಿಮುನಿವರ ।
ಪರಮಶುಕ ಯೋಗೀಂದ್ರ ದೂರ್ವಾ ।
ಸುರುತರದ ಮಾರ್ಕಾಂಡ ಮುನಿವರ ವಾಮದೇವಾದಿ ॥
ಪಿರಿದುಮಹಮಹ ಜ್ಞಾನಜಾತರು ।
ಇರದೆಯೋಗಾಭ್ಯಾಸ ಸಾಧಿಸಿ ।
ಪರಮಸಹಜಾನಂದ ಪಡೆದರು ಕೇಳು ನೀನೆಂದ ॥೨೮॥

ಇವರು ಸಹಜಾನಂದ ಧರಿಸಿಯೆ ।
ಶಿವನೆ ಆಗಿಯೆ ತಿರುಗುತಿರ್ಪರು ।
ಕುವರನೀನಿದು ಧರಿಸಿ ಸಹಜಾನಂದ ನೀನಾಗು ॥
ಭವಭವಂಗಳ ಗೆಲ್ಲುನೀನುಂ ।
ಜವದಿ ಬಹುಸಾಮರ್ಥ್ಯದಿಂದಲಿ ।
ಶಿವನೆ ನೀನಾಗೆಂದು ಹರಸುತಲಿರ್ದ ಸಿದ್ಧೇಂದ್ರ ॥೨೯॥

ಅದುವೆ ಕಾರಣ ಸಹಜನಂದವು ।
ವಿದಿತವಹುದಾರೂಢಗೈದರ ।
ತುದಿಯ ತೂರ್ಯವು ತೂರ್ಯತೀತವು ಆತಗಿರುತಿಹುದು ॥
ಸದಮಲಾನಂದದಲಿ ಸುಖವದು ।
ವದಗಿ ಮುಚ್ಚಿಯೆಯೇನನರಿಯದೆ ।
ಕದಲಿ ಸಂಚರಿಸುತ್ತಲಿಹ ನಾರೂಢನವನೆಂದ ॥೩೦॥

ಪರಮ ಯೋಗಾಭ್ಯಾಸದೊರಕಲು ।
ದೊರಕುವದು ವರರಾಜಸಂಗಡ ।
ದೊರಕುವದು ವರಮುಕುತಿ ನಿಜಕೈವಲ್ಯ ಸಂಪದವು ॥
ಸ್ಥಿರದಿತಾ ಪರಬ್ರಹ್ಮನಾಗಿಯೆ ।
ಇರುವ ಸರ್ವಾಕಾಲವಾತನು ।
ಜರೆ ಮರಣ ಜನನಗಳ ಕಳದೇ ಸುಖಿಸುವನುಯೆಂದ ॥೩೧॥

ತಾಪಸೋತ್ತ್ರವ ಸಿದ್ಧಗುರುವರ ।
ಈ ಪರಿಯೊಳುಸುರಲ್ಕೆ ರಾಜೇಶ್ ।
ಆ ಪರಾತ್ಪರ ಕೋರಿಸಿದ್ಧಗೆ ನಮಿಸಿ ವಿನಯದೊಳು ॥
ಆ ಪರಮಪರತರ ಯೋಗಸಾಧನ ।
ಈ ಪರಿಯೊಳ್ ನೆರೆ ಸಿದ್ಧಿಯಪ್ಪುದೆ ।
ತಾಪಹರನೆಂದೊರೆದ ಯೋಗದ ಕೀಲವಿವರದೊಳು ॥ ೩೨ ॥

ಶುದ್ಧವಹ ಏಕಾಂತಸ್ಥಲದಲಿ ।
ಗದ್ದುಗೆಯನಳವಡಿಸಿ ತಾನುಂ ।
ಸಿದ್ಧಕೃಷ್ಣಾಜಿನವ ದರ್ಭೆಯ ಮೂಲಿಕೆಯಗೊಂಡು ॥
ಬದ್ಧವಾಗಿಹೆ ಸ್ಥಿರಮಸದೊಳುಂ ।
ಹೊದ್ದಿ ಆನಂದದಸುಹೊದಿಕೆಯ ।
ಅದ್ದನೇರಿತ್ತಾದ ದೇಹನಿ ಕೂಡ್ರಬೇಕೆಂದ ॥ ೩೩ ॥

ನಾಸಿಕದ ಕೊನೆಯಲ್ಲಿ ದೃಷ್ಟಿಯ ।
ಸೂಸದಂದದಿ ನಿಲಿಸಿ ಬಹಳಭಿ ।
ಲಾಷೆಯಿಂದಲಿ ನಿಟಿಲ ಭ್ರೂಮಧ್ಯವನೆ ಗುರುತಿಟ್ಟು ॥
ಭಾಸಮಾನದ ಲಿಂಗತೇಜೋ ।
ರಾಶಿಯನು ಕಾಣುತ್ತ ಕದಲದೆ ।
ಬೇಸರದೆ ಅತ್ತಿತ್ತನೋಡದೆ ನೆನೆಯಬೇಕೆಂದ ॥ ೩೪ ॥

ಏರಿಸಲ್ಬೇಕ್ಬಲದ ಮೂಗಿನ ।
ದ್ವಾರದಲಿ ತಾ ಪ್ರಾಣಯಾಮದಿ ।
ಮಾರುತನನಲ್ಲಿದ್ದ ಪ್ರಾಣಾಯಾಮವಂದರಲಿ ॥
ಬಾರದಂತಿರೆ ಹೊರಗೆವಳಯುಕೆ ।
ಧೀರತನದಲಿ ವಾಯು ನಿಲ್ಲಿಸಿ ।
ಜೋರಿಸಲ್ಬೇಕೆಡದ ಮೂಗಿನ ದ್ವಾರದಿಂದೆಂದ ॥ ೩೫ ॥

ವಾಯುವೇರಿಸುವುದೆ ಸುಪೂರಕ ।
ವಾಯುವಿಳಿಸುವುದದುವೆ ರೇಚಕ ।
ವಾಯುಮೇಲೆಯು ನಿಂದು ಇಳಿಯದೆ ಏಳದಿರುತಿರಲು ॥
ಮಾಯಹರವದು ಕುಂಭಕವು ಇದ ।
ರಾಯವನು ಬಲ್ಲವನೆ ಯೋಗಿಯು ।
ಪ್ರೀಯದಿಂದಾನಿದನು ಪೇಳುವೆ ಕೇಳುಮಗನೆಂದ ॥ ೩೬ ॥

ರೇಚಕವು ವಿಧಿರೂಪು ವಿಷ್ಣುವು ।
ಸೂಚಿಸಲು ಪೂರಕವು ಕುಂಭಕ ।
ನಿಚ್ಚರುದ್ರನ ರೂಪುತಾನದು ತಿಳಿಯೊ ನೀನಿದನು ॥
ಗೋಚರಾಗ್ವದು ಬ್ರಹ್ಮವದು ಸಂ ।
ಕೋಚವಿಲ್ಲದೆ ತಾನುಮಾಡ್ದರೆ ।
ಈ ಚತುರ್ದಶ ಭುವನಕಧಿಪತಿ ಆಗ್ವನವನೆಂದ ॥ ೩೭ ॥

ಒಂದರಿಂದಲಿ ವಾಯುವೇರಿಸಿ ।
ವಂದರಿಂದಲಿ ವಾಯು ನಿಲ್ಲಿಸಿ ।
ವಂದರಿಂದಲಿ ವಾಯು ಇಳಿಸುವದೀ ವಿಧಾನದಲಿ ॥
ವಂದು ವಂದೊಂದಾಗಿ ಹೆಚ್ಚಿಸಿ ।
ಅಂದು ಪಿಪಲೀಕದತೆರೆದೊಳಾ ।
ಮುಂದೆ ಮಾರ್ಗವ ಹತ್ತಬೇಕೈ ಯೋಗಮಾರ್ಗಕ್ಕೆ ॥ ೩೮ ॥

ಥಿಟ್ಟಿತನದಿಂದ್ಯೆದೆ ಯೋಗಿಯು ।
ಘಟ್ಟಿಸನವದ್ವಾರವನು ಬಂಧಿಸಿ ।
ಇಟ್ಟ ದೃಷ್ಟಿಯು ಚೌಕದುನ್ಮನೆಯಲ್ಲಿ ತನಗಾಗ ॥
ದಟ್ಟಸಿಯೆ ದಶತೆರದ ನಾದವು ।
ಅಟ್ಟಸಿಯೆ ಆಸುಗಮ ಸ್ಥಲದಲಿ ।
ಹುಟ್ಟುವವು ಆ ಸುಖವು ಯೋಗಿಯೆ ಬಲ್ಲಕೇಳೆಂದ ॥ ೩೯ ॥

ಬೀರುತಿರೆ ನಾದವದು ಕರ್ಣದಿ ।
ತೋರುವುದು ಸಂಗಡಲೆ ಪ್ರಭೆಯದು ।
ಸಾರಿಪೇಳುವೆ ಸೂರ್ಯಶಶಿಮರುತಾಪ್ತ ಛಾಯದಲಿ ॥
ಕಾರುತಿಹ ಪೀಯೂಷದಮೃತದ ।
ಸಾರನೀಂಟುತ ಯೋಗಿವರ ತಾ ।
ಪಾರವಿಲ್ಲದ ಸುಖಸಮುದ್ರದಿ ಮುಳುಗಿ ಇರುತಿಹನು ॥ ೪೦ ॥

ವಿನುತ ಸಿದ್ಧನು ಶಿಷ್ಯನಿಗೆ ತಾ ।
ಘನಸುಯೋಗದ ಸೂಕ್ಷ್ಮಮರ್ಮವ ।
ಅನುನಯದಿ ತಿಳುಹಲ್ಕೆ ರಾಜೇಶ್ ಸಂತಸಂ ಗೊಂಡು ॥
ಎನಿತು ಪುಣ್ಯನೊ ನಾನು ಎನುತಲಿ ।
ಅನಘ ಶರಣಗೆ ನಮಿಸಿ ಕೇಳ್ದನು ।
ಎನಗನುಜ್ಞೆಯ ಮಾಡ್ವುದ್ವೆ ಇದ ಸಾಧಿಪುದಕೆಂದ ॥ ೪೧ ॥

ಮಗನೆ ಪೋಗ್ಯೆ ಜಯವದಾಗಲಿ ।
ಸೊಗಯಿಸುವ ಏಕಾಂತ ಸ್ಥಲಕುಂ ।
ಬಗೆಯರಿದು ನಾಪೇಳ್ದ ತೆರದಲಿ ಸಾವಧಾನದೊಳು ॥
ತಗೆಮಿಗಿಲ್ಲದೆ ಹೃದಯದೊಳು ನೀ ।
ಅಗಜೆಪ್ರಿಯಮಳರನನ್ನು ಸ್ಮರಿಸುತ ।
ಮಿಗಿಲೆನಿಪ ಯೋಗವನು ಸಾಧಿಸಿ ಧನ್ಯನಾಗೆಂದ ॥ ೪೨ ॥

ಪಡೆದು ಅಪ್ಪಣೆ ರಾಜಸಾಹೇಬ್ ।
ನಡೆದತಪವನು ಎಸಗಲೋಸುಗ ।
ಪೃಡಸ ಸನ್ನಿಭ ಕೋರಿಸಿದ್ಧನು ಬಳಿಕ ತಾನಿತ್ಯ ॥
ನಡೆಸುತಲಿ ದಾಸೋಹ ಶ್ರದ್ಧೆಯೊಳ್ ।
ನಡೆದು ಬರುತಿಹ ಜನಸಮೂಹಕೆ ।
ಕಡೆಯು ಇಲ್ಲದ ಕೀರ್ತಿದಿನದಿನಕಡರೆ ಜಗವೆಲ್ಲ ॥ ೪೩ ॥

ಪೆರಮುತರದೀ ಯತಿಪುರಾಣವ ।
ನುರುಮುದದೊಳೋದುವರಿಗಂ ಪೇ ।
ಳ್ವರಿಗೆ ಆಲಿಸುವರಿಗೆ ಸದ್ಗುರು ಕೋರಿ ಸಿದ್ಧೇಶಂ ॥
ಚಿರತರಾಯುರರೋಗ್ಯವೈಸಿರಿ ।
ಪರಮು ವಿದ್ಯೆ ಸುಭಕ್ತಿ ಮೊದಲಾ ।
ಗಿರುವ ಸತ್ಫಲಗಳನು ಕರುಣಿಸುತಿರ್ಪನಿದು ದಿಟವು ॥ ೪೪ ॥

ಅಂತು ಸಂಧಿ ಹನ್ನೆರಡಕ್ಕಂ ಪದನು ೫೦೭ ಕ್ಕಂ

ಮಂಗಲಂ ಮಹಾ ಶ್ರೀ ಶ್ರೀ ಶ್ರೀ

॥ ಶ್ರೀಗುರು ಕೋರಿ ಸಿದ್ಧೇಶ್ವರಾಯನಮಃ ॥



# ಹದಿಮೂರನೆಯ ಸಂಧಿ

ಸೂಚನೆ - ಧಿಟ್ಟ ತೋಟಪ್ಪಯ್ಯ ಸ್ವಾಮಿಗೆ ।
ಕೊಟ್ಟು ತನ್ನಧಿಕಾರವೇದದ ।
ಗುಟ್ಟು ತಿಳಿಸುತ ಮಾರಿದೇವಿಯ ಉರಿಯ ನಿಲ್ಲಿಸಿದ ॥

ಶ್ರೀಮದುಜ್ವಲ ಭೋಗಿಕುಂಡಲ ।
ಭೀಮದುರಿತ ವಿಘಟನ ನಿಶ್ಚಲ ।
ಹೈಮವತಿ ಸುಪ್ರೇಮ ಮಂಗಲನಾಮ ಧೃತಸೋಮ ॥
ವ್ಯೋಮಗಂಗಾವೃತ ಜಟಾಧರ ।
ರಾಮಣೀಯಕ ಯೋಗಿ ಜನಮನ । ॥ ೧ ॥
ಸ್ವಾಮಿಶಿವಪುರವಾಸ ಶಿವಲಿಂಗೇಶ ಕರುಣಿಪುದು

ಜರುಗಿಪೋಗಲು ಕೆಲದಿನಂಗಳು ।
ಪರಮಯೋಗಾಭ್ಯಾಸ ಮುಗಿಸುತ ।
ತೆರಳಿಬರುತಲಿ ರಾಜಸಾಹೇಬ್ ಗುರುವಿನಾ ಪದಕೆ ॥
ಎರಗಿ ಹರುಷದಿ ಪೇಳ್ದ ತನ್ನಯ ।
ಪರಿಯನೆಲ್ಲವ ಕೇಳ್ದುಗುರುವರ । ॥ ೨ ॥
ಹರಸುತಲಿ ಕರಶಿರದೊಳಿರಿಸುತ ಧನ್ಯನಾಗೆಂದ

ಸ್ತುತ್ಯ ತೋಟಪ್ಪಯ್ಯ ವಿದ್ಯದಿ ।
ವುತ್ತಮೋತ್ತಮನೆಂದು ಎನಿಸುತ ।
ಚಿತ್ತಭವ ಮದಹರನ ಧ್ಯಾನದೋಳ್ ಮಗ್ನನಾಗುತ್ತಿ ॥
ನಿತ್ಯವಿರಲಾಸ್ಥಿತಿಯ ನೋಡುತ ।
ಸತ್ಯ ಶ್ರೀಗುರು ಕೋರಿಸಿದ್ಧನು ।
ಅತ್ಯಧಿಕ ಸಂತಸವಬಡುತಂ ಇರ್ದು ತನ್ಮನದಿ ॥ ॥ ೩ ॥

ತನ್ನಪಟ್ಟದ ಮುಖ್ಯವಡೆತನ ।
ಸನ್ನುತಾ ತೋಟಯ್ಯಗೀಯಲು ।
ಮಾನ್ಯವೆಂದೆನುತಾಗ ಗುರುವರ ಮನದಿ ನಿಶ್ಚೈಸಿ ॥
ಇನ್ನು ಶುಭವೇಳೆಯನು ನೋಡುತ ।
ಉನ್ನತೋನ್ನತ ಜನರ ಕರೆಯಿಸಿ ।
ಚೆನ್ನೆಸೆಯುವೊಲು ಮಠವವೈಭವದಿಂದ ಶೃಂಗರಿಸಿ ॥ ೪ ॥

ಕರೆಸಿದನು ಬಹುಗ್ರಾಮ ಗ್ರಾಮದ ।
ಲಿರುವ ಮಹ ಅಧಿಕಾರಿ ಜನಗಳ ।
ಹರಗಣಂಗಳ ನಿಕರಬಂದುದು ಅಪರಿಮಿತವಾಗಿ ॥
ಮೆರೆವ ಮಂಟಪರಚನೆಯಿಂದಲಿ ।
ಪರಿಪರಿಯ ಸೊಬಗಾಂತ ಸಿಂಗರ
ಭರಿತಮಾಗಿಯೆ ತೋರ್ದುದಿಂದ್ರನ ಆಲಯದ ತೆರದಿ ॥ ೫ ॥

ಕುವರ ತೋಟಪ್ಪಯ್ಯ ಸ್ವಾಮಿಗೆ ।
ಜವದಿ ಮಂಗಲಸ್ನಾನ ಮಾಡಿಸಿ ।
ವಿವಿಧ ಶಿವಲಾಂಛನದ ತೊಡಪನು ತೊಡಿಸಿ ಮಂಜುಳದಿ ॥
ಸುವಿತ ಪೀಠದಿ ಮೂರ್ತಮಾಡಿಸಿ ।
ಅವಿರಳಸ್ಥಿತಿ ಕೋರಿಸಿದ್ಧನು ।
ಶಿವನೆ ನೀನಾಗೆನುತ ಶಿರದೊಳು ಕರವತಾನಿಟ್ಟ ॥ ೬ ॥

ಇತ್ತ ಸಿದ್ಧನು ಕಾಣಿಕೆಯ ಸಲಿ ।
ಸುತ್ತ ನಿಲ್ಲಲ್ಕಾಗ ಜನಗಳು ।
ಇತ್ತರೈ ಕಪ್ಪವನು ನಮಿಸುತ ವಿವಿಧವಸ್ತುಗಳ ॥
ಬಿತ್ತರಿಸಲಳವಲ್ಲ ವೈಭವ ।
ನೆತ್ತುತೋರ್ದುದು ಗುರುವರನು ತಾ ।
ಚಿತ್ತಜಾರಿಯ ಚರಣಸ್ಮರಿಸುತ ತೋಷದಿಂದಿರ್ದ ॥ ೭ ॥

ಕೂಡಿದಾ ಜನವೃಂದಕುರುತಾ ।
ಮಾಡಿಸಿ ಸುಸವಿಪಾಕ ಸಂಗ್ರಹ ।
ನೀಡುತಲಿ ಭೋಜನವ ಮಾಡಿಸೆ ತೃಪ್ತಿಗೊಳಲಾಗ ॥
ಕೂಡಿರಸ ತ್ರಯೊದಶದ ತಾಂಬುಲ ।
ನೀಡಿ ದಕ್ಷಿಣೆ ಪೂರ್ಣಭಾವದಿ ।
ನೋಡಿ ಸಂತತ ಬಡುತಲಿರ್ದುದು ನೆರೆದ ಸರ್ವಜನ ॥ ೮ ॥

ಇಂತುವಿುಗೆ ಸಂಭ್ರಮವು ಮೂದಿನ ।
ವಂತು ಜರುಗಲು ಬಂದಜನ ಸ ।
ಮಂತು ಅಪ್ಪಣೆಗೊಂಡು ನಡೆದರು ಗುರುಪದಕೆ ನಮಿಸಿ ॥
ಎಂತು ಪೇಳಲಿ ತೋಟಪ್ಪಯ್ಯನ ।
ಶಾಂತಗುಣಗಳ ಕೀರ್ತಿತಾದಿ ।
ಗಂತರದಿ ಹರಡುತ್ತಲಿರುತಿರೆ ದಿನದಿನಂಗಳೊಳು ॥ ೯ ॥

ಇತ್ತ ಶ್ರೀಗುರು ತೋಟಪ್ಪಯ್ಯಗೆ ।
ವುತ್ತಮೋತ್ತಮ ವೇದವಾ ಅರು ।
ಹುತ್ತಲಿರ್ದನು ಕೋರಿಸಿದ್ಧನು ಬಹಳ ಪ್ರೇಮದಲಿ ॥
ಚಿತ್ತಶುದ್ಧಿಯು ಅಗೆ ರಾಜೇಶ್ ।
ಮತ್ತೆ ಕೇಳ್ದನು ಗುರುವೆಯೆನ್ನಗೆ ।
ಬಿತ್ತರಿಸು ಶೃತಿಶಿರದಿ ಮೆರೆಯುವ ಬೋಧವನು ಎಂದ ॥ ೧೦ ॥

ಈಗ ಪೇಳುವೆ ಬಾಲನಿನ್ನಗೆ ।
ಆಗಮದ ನಿಜಬೋಧ ವಿವರವ ।
ಯೋಗಿಗಳು ಮೈಮರೆವ ಅಮೃತವು ಸುರಿವ ಲಹರಿಯಲಿ ॥
ಈಗ ಹೊಕ್ಕರೆ ಮನಕೆ ಭವಭವ ।
ರೋಗವೆಲ್ಲವು ದಹಿಸಿಪೋಗ್ವುದು ।
ಈಗ ಕಿವಿಗೊಟ್ಟಾಲಿಸ್ಯೆ ಎನುತಿರ್ದ ಸಿದ್ಧೇಶ ॥ ೧೧ ॥

ಬೋಧೆಗಳು ಬಹಳುಂಟು ಪೇಳ್ವರು ।
ಬೋಧಿಪಂಥ ಬೋಧದಲ್ಲವು ।
ಬೋಧೆಯನು ಕೇಳಿದಡೆ ಸಾಕ್ಷಾದ್ಬ್ರಹ್ಮ ತಾನಹನು ॥
ಬೋಧೆ ಕೇವಲ ಅಮೃತ ರೂಪಿದು ।
ಬೋಧಿಸುವೆ ನಿನಗೀಗಳೆಂದೇ ।
ಬೋಧಿಸಿದ ಮಗನಿಂಗೆ ಶ್ರೀಗುರು ಕೋರಿಸಿದ್ಧೇಶ ॥ ೧೨ ॥

ವಿದ್ಯವಿದ್ಯದಿ ಬ್ರಹ್ಮಬಿಂಬವು ।
ಸಿದ್ಧದಿಂ ತೋರುವದು ಎಂದರೆ ।
ಶುದ್ಧ ಬ್ರಹ್ಮಕೆ ರೂಪವಿಲ್ಲವು ಹೊಳೆವದೆಂತೆನಲು ॥
ಬುದ್ಧಿವಂತನೆ ತಿಳಿಯೊ ಬ್ರಹ್ಮದಿ ।
ಬುದ್ಧಿಹುಟ್ಟಿತು ಬ್ರಹ್ಮನಾನೆನು ।
ತಿರ್ದ ಮಹದಹಂಕಾರ ತಿಳಿವಿಕೆಯಿಂದ ಉಭಯದಲಿ ॥ ೧೩ ॥

ಬಿಂಬಶುದ್ಧಾ ಬ್ರಹ್ಮದಾಪ್ರತಿ ।
ಬಿಂಬಜೀವೇಶ್ವರರು ಎಂತೆನೆ ।
ಅಂಬರವೆ ಕರೆಸಿತ್ತು ಘಟಪಟನಾಕವೇ ಎನಿಸಿ ॥
ಸಂಭ್ರಮಾದತಿಯೊಂದೆ ಬ್ರಹ್ಮವು ।
ತುಂಬಿವಿದ್ಯಾವಿನಯದಿಂದಲಿ ।
ಇಂಬು ಇಂಬಿಲಿ ಕರಸುತಿರೆ ನಿಜಬ್ರಹ್ಮ ನೀನೆಂದ ॥ ೧೪ ॥

ಕುಂಭಕೊಡಿಯೆ ಬಯಲು ತಿರುಗಿದ ।
ಡಂಬರವು ತಿರುಗುವುದೆ ಆ ಪರಿ ।
ಎಂಬೆನೇನನು ಲಿಂಗದೇಹದಿ ತಿರುಗಿವೆಯೊ ನೀನು ॥
ಕುಂಭಕೆಯು ಪತ್ತಿಹುದೆ ಆ ಬಯ ।
ಲೆಂಬುದದು ಅದರಂತೆ ನೀನೀ ।
ಗಿಂಬು ಆಗಿಯೆ ಲಿಂಗದೇಹಕೆ ಸಾಕ್ಷಿನೀನೆಂದ ॥ ೧೫ ॥

ದಗ್ಧ ಪಟದಂದದಲಿ ಯೋಗಿಗ ।
ಳಿದ್ದಿಹರು ಅದುಯೆಂತು ಎಂದರೆ ।
ದಗ್ಧ ಪಟವದು ವುಡಲಿಕೆಯು ಪಿಡಿಯಲ್ಕೆ ಬಾರದುದು ॥
ದಗ್ಧ ಪಟದಾತೆರದಿ ತಾನೀ ।
ಗಿದ್ದಿಹರು ತನುತ್ರಯದ ಅಭಿಮಾ ।
ನಿದ್ದುದೆಲ್ಲದ ಕಳೆದು ಸಾಕ್ಷಿ ಬ್ರಹ್ಮನಾಗಿಹುದು ॥ ೧೬ ॥

ಆದು ನಿಮಿತ್ಯದಿ ಪುಣ್ಯಪುರುಷರು ।
ಸದಮಲದ ಜ್ಞಾನವನು ಪಡೆದೇ ।
ಇದುವೆ ನಿಶ್ಚಯುವೆಂದು ತಮ್ಮನೆ ಬ್ರಹ್ಮವೆಂತೆಂದು ॥
ಪದುಳವಾಗಿರುತಿಹರು ಜಗದಲಿ ।
ಅದನು ಪೇಳುವೆ ಅವರನಾಮವ ।
ಮುದದಿ ನೀ ಕೇಳೆಂಧು ಬಾಯ್ದೆರೆದಾಗ ಸಿದ್ಧೇಂದ್ರ ॥ ೧೭ ॥

ನಾರದನು ವಾಶಿಷ್ಮ ಅತ್ರಿಯು ।
ನೀರಜನಕಸನಂದ ಮೋಹೌ ।
ಚಾರುಮಂಗಳ ರೋಮಶನು ದುರ್ವಾಸ ತೃಣಬಿಂದು ॥
ಧಾರುಣಿಯೊಳ್ ಮಾರ್ಕಾಂಡ್ಯಗಸ್ತ್ಯನು ।
ದಾರಕರ್ದಮ ಕಪಿಲರುಷಿವರ ।
ಪಾರ ಮಹಿಮರು ತಾವು ಬ್ರಹ್ಮಾಯೆಂದು ಭಾವಿಪರು ॥ ೧೮ ॥

ನಂದಿಕೇಶ್ವರ ಯಾಜ್ಞವಲ್ಕ್ಯನು ।
ಸಿಂಧುಸಮನುಮರೀಚಿ ಜ್ಞಾನಾ ।
ಸಿಂಧುರನು ದತ್ತಾತ್ರಿವಾಮಾದೇವ ಸಂವರ್ತ ॥
ಬಂಧಮುಕ್ತ ದಧೀಚಿ ಕಶ್ಯಪ ।
ಕುಂದು ಪೊಂದಿದ ಜಾಮದಗ್ನಿಯು ।
ಇಂದಿವರು ನಿಶ್ಚೈಸಿ ತಾವ್ ಬ್ರಹ್ಮೆಂದು ಭಾವಿಪರು ॥ ೧೯ ॥

ವಡಬವಿಶ್ವಾಮಿತ್ರ ಸೌಭರಿ ।
ಕಡುಕರುಣಿ ಗೌತುಮನು ಕಣ್ವನು ।
ಧೃಢತರ ಪರಾಶರನು ಬೃಹಸ್ಪತಿ ಪರತರದ ಶುಕ್ರ ॥
ವಡೆಯನಹ ಪೌಲಸ್ತ್ಯ ಸರ್ವರಿ ।
ಗೊಡೆಯನಹ ದೇವಾದಿ ದೇವತರ್ ।
ಬಿಡದೆಯಿಂತಿವರೆಲ್ಲ ತಾವ್ ಬ್ರಹ್ಮೆಂದು ಭಾವಿಪರು ॥ ೨೦ ॥

ಬ್ರಹ್ಮತಾವೆಂದವರು ಚಿಂತಿಸಿ ।
ಬ್ರಹ್ಮವೇ ತಾವಾಗಿ ಇಹರ್ಕೈ ।
ಬ್ರಹ್ಮಚಿಂತನೆಯಿಂದ ಕೆಟ್ಟವರಾರು ಜಗದಲ್ಲಿ ॥
ಬ್ರಹ್ಮವೆಂದೇ ನಿನ್ನ ಚಿಂತಿಸು ।
ಬ್ರಹ್ಮ ಸಾಕ್ಷಾತ್ಕಾರವಾಗುವಿ ।
ಬ್ರಹ್ಮ ನೀನಾಗೆಂದು ಹರಸುತಲಿರ್ದ ಸಿದ್ಧೇಂದ್ರ ॥ ೨೧ ॥

ಕೇಳಿ ತೋಟಪ್ಪಯ್ಯ ಗುರುವರ ।
ಬಾಳಸಂತೋಷದಲಿ ಮುಳುಗುತ ।
ಬೀಳ್ದ ಸಿದ್ಧನ ಚರಣಕಮಲಕೆ ತೋಷದಿಂ ತಾನು ॥
ಮೇಲುದಯೆವನು ತೋರಿಯೆನ್ನಗೆ ।
ಪೇಳಿದಿರಿ ಶೃತಿಸಾರವೆಂದೆನೆ ।
ಶೀಲ ಸಿದ್ಧನು ಪೇಳ್ದ ನೀನೀ ಸ್ಥಿತಿಯಲಿರು ಎಂದ ॥ ೨೨ ॥

ಅಳಿದು ಪೋಗಲು ಕೆಲವು ದಿನಗಳು ।
ಲಲನೆ ನೀಲಾಂಬಿಕೆಯು ಗೃಹದಿಂ ।
ದೊಲಿದು ಅಮವಾಸ್ಯೆಯ ಸುನೇಮವನ್ನೆದೆ ವಹಿಸುತಲಿ ॥
ಬಲು ಸುಸಂಭ್ರಮದಿಂದ ಜ್ಯೋತಿಯ ।
ಲಲನೆ ಮಣಿಯರು ಪೊತ್ತು ಬರುತಿರೆ ।
ನೆಲವು ಬಿರಿಯುವ ತೆರದಿ ವಾದ್ಯದ ರಭಸದಿಂ ಕೂಡಿ ॥ ೨೩ ॥

ಬರುತಿರಲು ಗುರುವರನ ಕೂಡಿಯೆ ।
ಭರದಿ ಮಾರಿಕ ದೇವಿ ಬಂದುಂ ।
ಬರುವೆನಾನುಂ ನಿನ್ನ ಕೂಡಿಯೆ ಎನಲು ಸಿದ್ಧೇಂದ್ರ ॥
ಇರುವ ಜನರಾಮಧ್ಯ ಮಾರ್ಗದಿ ।
ತೊರೆದು ಬಹು ಅವಸರವನಗೊಂಬುತ ।
ತ್ವರದಿ ಪೋಡುತಬಂದು ಪೊಕ್ಕನು ತನ್ನ ಮಠದೊಳಗೆ ॥ ೨೪ ॥

ಬಂದು ಯತಿವರ ಮಠದಿ ನಿಲ್ಲಲು ।
ಹಿಂದಿನಿಂದಲಿ ಅಖಿಲ ಜನರಾ ।
ವೃಂದವದು ತಾವ್ ಬಂದು ಕೇಳ್ದರು ಸಿದ್ಧಯತಿವರಗೆ ॥
ತಂದೆ ನೀವ್ಗಳು ಯೇನುಕಾರಣ ।
ಬಂದಿರ್‍ಯೆ ನಿಖಿಲರನು ಬಿಡುತಲಿ ।
ಎಂದು ಕೇಳಲು ಸಿದ್ಧ ನುಡಿದನು ಮಂದಸ್ಮಿತದಿಂದ ॥ ೨೫ ॥

ಕೇಳಿರ್‍ಯೆ ನನಗಾದ ವಿವರವ ।
ಬಾಳ ವಿಸ್ಮಯವಾಯ್ತು ಮಾರ್ಗದಿ ।
ನೀಲಗಾತ್ರದ ದೇವಿ ಬರುತಲಿ ನನ್ನ ಸಂಗಡಲೆ ॥
ಮೇಳವಾಗಿಯೆ ಬರುವೆನೆಂದೆನೆ ।
ಜಾಳಿಸಿಯೆ ನಾನುಡಿಯಲಾಕೆಯು ।
ಬಾಳಮುನಿಸಿಲಿ ಪೃಷ್ಟಭಾಗದಿ ಬಡಿಯಲಿಕೆ ನಾನು ॥ ೨೬ ॥

ಬಿಡುತ ನಿಮ್ಮನು ಮಧ್ಯಮಾರ್ಗದಿ ।
ನಡೆದು ಬಂದೆನು ಅವಸರದಿ ನಾ ।
ವೊಡನೆ ನೋಡಿರಿ ಬೆನ್ನಿನಲಿ ನೀವ್ ಬಡಿದಕ್ಷತವನ್ನು ॥
ಹಿಡಿದ ಬೆರಳಿನಕ್ಷತದ ಗಾಯದ ।
ಬೆಡಗನೀಕ್ಷಿಸಿ ಚಕಿತ ಭಾವದಿ ।
ಅಡಿಗೆಯೆರಗುತ ಬೇಡಿಕೊಂಡರು ರಕ್ಷಿಸೆಮಗೆಂದು ॥ ॥ ೨೭ ॥

ಮುದದಿ ಗುರುಸಿದ್ಧೇಶ ನುಡಿದನು ।
ಬೆದರಬೇಡಿರಿ ನೀವು ಸರ್ವರು ।
ಪದಳದಿಂದಿರಿ ಎಮ್ಮ ಮಠದೊಳು ಚಿಂತೆಗೈಯದಲೆ ॥
ಸದಯವಾದ ಪ್ರಸಾದಗೊಳ್ಳುತ ।
ಲಿದನು ಸೇವಿಸೆ ಆವಪೀಡೆಯು ।
ವದಗದಿರುವದು ಎಂದು ನಿರ್ಭರಗೈದು ಪೇಳಿದನು ॥ ೨೮ ॥

ಬಲ್ಲಿದ ಶ್ರೀ ಕೋರಿ ಸಿದ್ಧನ ।
ಸೊಲ್ಲು ಕೇಳುತ ಸರ್ವಜನಗಳು ।
ಸಲ್ಲಲಿತ ಮಠದೊಳಗೆ ನಿಂದರು ಆಜ್ಞೆ ಶಿರದಿರಿಸಿ ॥
ಎಲ್ಲಿಗೋಗದೆ ರಜನಿ ಕಳೆಯುತ ।
ಮೆಲ್ಲಗಾರವಿ ಪೂರ್ವ ಅಚಲದಿ ।
ನಿಲ್ಲಲಾಪುರ ಜನರು ನಡೆದರು ತಮ್ಮ ಆಲಯಕೆ ॥ ೨೯ ॥

ಇನ್ನುಳಿದ ಪರಗ್ರಾಮದಾ ಜನ ।
ಸನ್ನುತನ ಪದಕೆರಗಿ ಅಪ್ಪಣೆ ।
ಯನ್ನು ಪಡೆದು ಪ್ರಸಾದಗೊಳ್ಳುತ ನಡೆಯೆ ಮಾರ್ಗದೊಳು ॥
ಬನ್ನ ಬಡುತಲಿ ಭೇದಿವಾಂತಿಯೊ ।
ಳಿನ್ನು ಬಳಲುತ ಮಹಪ್ರಸಾದವ ।
ದನ್ನು ಸಲಿಸಲು ಕ್ಷೇಮಪೊಂದುತ ನಡೆದರೈ ಪುರಕೆ ॥ ೩೦ ॥

ಪಾವನಾತ್ಮಕ ಯೋಗಿ ಸಿದ್ಧನು ।
ದೇವಿಯುಪಟಿಳ ಶಾಂತಗೈಯಲು ।
ಈವಿ ತಾಯುಶ ಧರಣಿ ಭಾಗದಿ ಅತಿಶಯವದಾಗಿ ॥
ದೇವ ದೇವನು ಈತನೆಂದೇ ।
ಕಾವಗುರು ಮಹಮಹಿಮನೆಂದೇ ।
ಆವ ಕಾಲದಿ ಜನರಿಗುಪಕೃತಿ ಗೈಯ್ಯುತಿರುತಿರ್ದಂ ॥ ೩೧ ॥

ಪರಮತರದೀ ಯತಿಪುರಾಣವ ।
ಸುರುಮುದದೊಳೋದುವರಿಗಂ ಪೇ ।
ಳ್ವರಿಗೆ ಆಲಿಸುವರಿಗೆ ಸದ್ಗುರು ಕೋರಿ ಸಿದ್ಧೇಶಂ ॥
ಚಿರತರಾಯುರರೋಗ್ಯವೈಸಿರಿ ।
ಪರಮ ವಿದ್ಯೆ ಸುಭಕ್ತಿ ಮೊದಲಾ ।
ಗಿರುವ ಸತ್ಫಲಗಳನು ಕರುಣಿಸುತಿರ್ಪನಿದು ದಿಟವು ॥ ೩೨ ॥

ಅಂತು ಸಂಧಿ ಹದಿಮೂರಕ್ಕಂ ಪದನು ೬೦೯ ಕ್ಕಂ

ಮಂಗಲಂ ಮಹಾ ಶ್ರೀ ಶ್ರೀ ಶ್ರೀ

॥ ಶ್ರೀಗುರು ಕೋರಿ ಸಿದ್ಧೇಶ್ವರಾಯನಮಃ ॥



# ಹದಿನಾಲ್ಕನೆಯ ಸಂಧಿ

ಸೂಚನೆ– ಟೆಂಗಳಿಯ ವಂಶಕ್ಕೆ ಶಾಪಿಸಿ ।
ಮಂಗಲಾತ್ಮಕ ಘನಮಹೇಶಗೆ ।
ತುಂಗಭೆಟ್ಟಯನಿತ್ತು ಬೋಧಿಸಿ ತಿಮ್ಮಪುರಿಗೈದಂ ॥

ಪವನ ಜಲವಾಕಾಶ ಶಿಖಿಭೂ ।
ರವಿ ಶಶಿಯು ಪರಮಾತ್ಮವೆಲ್ಲವ ।
ಸವನಿಸುತ ಜಡಚೇತನಂತರ ಬಹಿರದೊಳಗೆಲ್ಲಂ ॥
ಶಿವನೆ ನೀನೇ ಬಿಡದೆ ವ್ಯಾಪಿಸಿ ।
ಭುವನ ಬ್ರಹ್ಮಾಂಡೆಲ್ಲವನು ಪೊರೆ ।
ವವನೆ ಭಕ್ತರ ಪೊರೆಯಬೇಕೈ ಶಂಭುಶಿವಲಿಂಗಂ ॥ ೧ ॥

ಗತಿಸಿಪೋಗಲು ಕೆಲದಿನಂಗಳು ।
ಅತಿಶಯವು ಮತ್ತೊಂದು ನಟಿಸಿತು ।
ವಿತತ ನಾಲ್ವಾರ್ ಪುರದ ಅಗಸೀ ಭಾಗದೊಳಗಂದು ॥
ಕೃತಕಮತಿ ಟೆಂಗಳಿಯ ವಂಶದ ।
ಲತಿಭಯವು ಜನರಿಂಗೆ ತೋರುವ ।
ಸ್ಥಿತಿಯುಮಿರೆಯವರಲ್ಲಿ ಸೀತಾರಾಮನೆಂಬುವನು ॥ ೨ ॥

ಕೆಡುಕು ಶಾಂಬರಿ ವಿದ್ಯಮಂತ್ರವ ।
ಧೃಢದಿ ಪಠಿಸುತ ಕ್ಷುದ್ರಭಾವದಿ ।
ಹಿಡಿದು ಸಲೆಭೇತಾಳ ಪೈಶಾಚಿಗಳ ನಿಚಯವನು ॥
ದುಡಿಸಿಕೊಂಬನು ಅವುಗಳಿಂದಲಿ ।
ಬಿಡದೆ ರಾತ್ರೀ ದಿವಸದಲಿ ತಾಂ ।
ಪೊಡವಿಯೊಳಗತಿಕೀರ್ತಿ ಪೊಂದುತಲಿರಲು ಕೆಲದಿನವು ॥ ೭ ॥

ಇತ್ತ ಶ್ರೀಗುರು ಕೋರಿಸಿದ್ಧನ ।
ಬಿತ್ತರಿಪ ಮಹಮಹಿಮೆ ನೋಡುತ ।
ಚಿತ್ತದೊಳಗುರಿಗೊಂಡು ಸೀತಾರಾಮನೆಂಬುವನು ॥
ಅತ್ಯಧಿಕ ಗರ್ವವನು ತಾಳುತ ।
ಪ್ರತ್ಯಗಾತ್ಮನ ಬಳಿಗೆ ಬರುತಲಿ ।
ನಿತ್ಯವಾಗ್ವಾದವನು ಮಾಡುವ ಕುಹಕ ಭಾವದೊಳು ॥ ೮ ॥

ದೇವಸಿದ್ಧನ ಮುಂದೆ ತನ್ನಯ ।
ಅವವಿಧ ಕುಟಿಲತ್ವ ಸಾಗದೆ ।
ಭಾವದಲಿ ಬೇರೊಂದು ಬಗೆಯುತ ದುರಿತ ವ್ಯಕ್ತಿಯು ತಾ ॥
ಚಾವುಗಡಗರ ಬೆರೆಸಿ ಪಾಕವ ।
ಗಃವಿಲನು ಮಾಡ್ವಾಗ ಮುನಿಸಿಲಿ ।
ಆ ವಿಮಳಯತಿಸ್ಥಲಕೆಯೆಡೆಯನು ಮಾಡಿಕಳಿಸಿದನು ॥ ೯ ॥

ತಂದು ಎಡೆಯನು ಮಠದಿಕೊಡಲಿಕೆ ।
ತಂದೆ ಗುರುಸಿದ್ಧೇಂದ್ರ ನೇಡುತ ।
ಬಂದ ಸಂಶಯದಿಂದ ಪೇಳ್ದನು ಅಲ್ಲಿರುವ ಜನಕೆ ॥
ಇಂದು ಇದನನು ಆರುಮುಟ್ಟದೆ ।
ವೊಂದುತುತ್ತೂ ಆರುಕೊಳ್ಳದಿ ।
ರೆಂದು ಆಜ್ಞೆಯ ಮಾಡಿನೋಡ್ದನು ದಿವ್ಯದೃಷ್ಟಿಯಲಿ ॥ ೬ ॥

ನೋಡಲಿಕೆ ಯತಿವರನು ಆಗಳ್ ।
ಆಡಲೇಂ ತಂದಿರುವ ಷಾಕದಿ ।
ಗೂಡಿಕ್ರಿಮಿಗಳು ಪೆರ್ಚಿಪರಿಯುತಲಿರ್ದವಾನಂತ ॥
ನೋಡಿದರು ಸರ್ವತ್ರ ಜನಗಳು ।
ಆಡಿದರು ಮನಬಂದ ತೆರದಲಿ ।
ಪ್ರೌಢ ಶ್ರೀಗುರು ಸಿದ್ಧಯತಿಪನ ಮಹಿಮೆ ಕೊಂಡಾಡೆ ॥ ೭ ॥

ಕೇಳುತಲಿ ಈ ವಿಧದ ವಾರ್ತೆಯು ।
ಬಾಳವಿರಸವನಾಂತು ಕುಟಿಲನು ।
ಕೋಳುಗೊಳ್ಳುವೆನೆನುತ ಸಿದ್ಧನ ಸತ್ವಸಿದ್ಧಿಗಳ ॥
ಬೀಳುಗೊಟ್ಟನು ಭೂತನಿಕರಕೆ ।
ಪೇಳುತಲಿ ಯತಿವರನ ಹರಣವ ।
ಕೇಳಿಬರುವುದು ನೀವ್ಗಳೆಂದುಂ ಮಾಡ್ದನಪ್ಪಣೆಯ ॥ ೮ ॥

ಕೊಂಡು ಅಪ್ಪಣೆಯುನ್ನು ಭೂತದ ।
ತಂಡಗೂಡುತ ಬಂದು ಜ್ಞಾನಪ್ರ ।
ಚಂಡ ಶ್ರೀಗುರು ಕೋರಿ ಸಿದ್ಧನ ಮುಂದೆ ನಿಲ್ಲಲ್ಕೆ ॥
ಕಂಡು ನಸುಗೋಪದಲಿ ಯತಿಪನು ।
ದಿಂಡುಗೆಡಹಿದ ಯೋಗದೃಷ್ಟಿಲಿ ।
ಭಂಡನಾಳ್ಗಳೆ ಎಲ್ಲಿ ಪೋಗ್ವಿರಿ ನಿಲ್ಲಿರಿಲ್ಲೆಂದ ॥ ೯ ॥

ಗುರುವರನು ಈ ಪರಿಯೊಳ್ ವಚಿಸಲು ।
ಮರುಳುಗಳು ಗದಗದನೆ ನಡುಗುತ ।
ಚರಣ ಪದ್ಮಕೆ ಶಿರವನೀಡುತ ನಮಿಸಿ ನಿಂದಿರಲು ॥
ತೆರಳಬೇಡಿರಿ ನೀವ್ಗಳೆಂದುಂ ।
ಗುರುವರನು ಅಜ್ಞೆಯನು ಮಾಡುತ ।
ಸ್ವರದಿ ಬಿಗಿದನು ಮಾಲಗಂಬಕೆ ನಿಖಿಲಭೂತಗಳ ॥ ೧೦ ॥

ಜ್ಞಾನಿಗಳ ಮಹಿಮೆಯನು ಅರಿಯದೆ ।
ಹೀನವಿದ್ಯದ ಗರ್ವದಿಂದಲಿ ।
ತಾನು ಮಾಡ್ದನು ದುರಿತಕೃತಿಯನು ಯೆಂದಗುರುರಾಯ ॥
ಅನಘನಿತ್ತನು ಶಾಪ ಅವನಿಗೆ ।
ಅನುದಿನವು ಅವನೊಂಶ ನಿಲ್ಲದೆ ।
ತನಗೆ ತಾನೇ ನಾಶವಾಗಲಿಯೆಂದು ಮನನೊಂದು ॥ ೧೧ ॥

ಒಂದುದಿನವಾ ಘನಮಠೇಶನು ।
ಬಂದ ಕೋರಿ ಸಿದ್ಧನಂ ಆ ।
ನಂದದಿಂ ಕಾಣಲ್ಕೆ ನಾಲ್ವಾರ್ ಪುರಕೆ ಸಂಮುದದಿ ॥
ಸಂದ ಶ್ರೀಸಂಗಯ್ಯ ಸ್ವಾಮಿಯ ।
ಅಂದವೆತ್ತಿಹ ಮಠದೊಳಿಳಿಯಲು ।
ಅಂದು ಕೇಳ್ದರು ಪೂಜ್ಯರೇ ತಮಗಮನವೆಲಿಗೆನುತ ॥ ॥ ೧೨ ॥

ನುಡಿದ ಶ್ರೀಗುರು ಘನಮಠೇಶ್ವರ ।
ಮೃಡನ ಸನ್ನಿಭ ಕೋರಿಸಿದ್ಧನ ।
ಅಡಿಯ ಕಾಣಲು ಬಂದಿರುವೆನಾ ಪಿರಿದು ತೋಷದೊಳು ॥
ವೊಡನೆ ನೀವ್ಗಳು ಪೋಗಿತ್ವರದಿಂ ।
ವಡೆಯ ಸಿದ್ಧನು ಮಠದೊಳಿರುವುದು ।
ಗಡನೆ ತಿಳಿಸಿರಿಯೆನಲು ನಡೆದರು ಸಿದ್ಧನಾ ಮಠಕೆ ॥ ೧೩ ॥

ಬರಲು ಚರರವಸರದಿ ಮಠದೊಳು ।
ಮುರುಗಿಸ್ವಾಮಿಯ ಮಠದ ಬಯಲೊಳು ।
ಗುರುಕುಳಿತುದನು ಕಂಡುಯೆರಗಿದರಾಗ ಪದದ್ವಯಕೆ ॥
ಅರುಹಲಿಕೆ ಕರಮುಗಿದು ನಿಂದುಂ ।
ಪರಮ ಘನಮಠದೊಡೆಯ ನಿಮ್ಮಯ ।
ಚರಣ ಕಾಣಲು ಹರುಷದಿಂ ಬಂದಿರುವರೆಂದೆನಲು ॥ ೧೪ ॥

ಪರಮತರದಾ ಘನಮಠೇಶನು ।
ಪರಮ ಗುರುವಿನನುಗ್ರಹವ ತಾಂ ।
ಧರೆಯೊಳಗೆ ಪಡೆದಿಲ್ಲವದರಿಂ ಅವರಿಗೂ ನಮಗೂ ॥
ಎರಕವಾಗದು ಜ್ಞಾನಪಥದೊಳು ।
ಬರುವುದೇಂ ಸರಿಯೆಲ್ಲವೆನ್ನಲು ।
ತೆರಳಿಪೋಗುತ ತಿಳುಹಿದರು ಗುರುನುಡಿದ ವಚನವನು ॥ ೧೫ ॥

ಆಲಿಸುತ ಚರರ್ಪೇಳ್ದ ಪರಿಯನು ।
ಶೀಲನಾಮನದೊಳಗೆ ವಿಸ್ಮಯ ।
ತಾಳಿಬಂದನು ಹರಸದೃಶ ಶ್ರೀ ಸಿದ್ಧನಾಮಠಕೆ ॥
ಕೇಳಿದನು ಈ ವಾರ್ತೆ ಸಿದ್ಧನು ।
ಲೀಲೆಯಿಂ ಮುರುಗೇಂದ್ರ ಸ್ವಾಮಿಯ ।
ಆಲಯವತಾಪೊಕ್ಕು ಇಕ್ಕಿದ ಬಗಿದುಬಾಗಿಲನು ॥ ೧೬ ॥

ಸಾಗೆಬರುತಲಿ ಘನಮಠೇಶನು ।
ಪೋಗಿನೋಡಿದ ಮಠದೊಳಗೆ ಗುರು ।
ಯೋಗಿಸಿದ್ಧನು ಕಾಣದಿರುತಿರೆ ದುಮ್ಮನದಿ ನಿಂದು ॥
ಕಾಗಿನೆವವನು ಕೊಂಡು ತೋಷದ ।
ಲಾಗಪಾಡಿದನೊಂದು ಕೃತಿ ಪೊಸ ।
ರಾಗದಿಂ ಪರಬ್ರಹ್ಮದಿರವನು ಘನಮಠೇಶನು ತಾ ॥ ೧೭ ॥

ಕಾಗಿ ಕರೆಯುತಲಿರುವುದೈ ತಾ ।
ಬೇಗನೇ ಬೊಯೆಂದು ಅರಚುತ ।
ನಾಗಮೂಲನ ನಿಲುವುಗಾಣಲು ತ್ವರಿತದಲಿಯೆಂದು ॥
ಯೋಗಿ ಶ್ರೀಗುರುವಿಂಗೆ ಬಲ್ಮೆದ ।
ವಾಗಿ ಆನಂದವನು ಬೀರುವ ।
ಮೇಗೆನಿಪ ಅತಿಚಲುವಿನಿಂದಿಹ ವೃದ್ಧಕಾಗಿಯು ತಾ ॥ ೧೮ ॥

ಅರುಚಕ್ರವನೇರಿ ನಿಲ್ಲುತ ।
ಮೀರಿದುನ್ಮನೆ ಸೇರಿ ಅಮೃತವ ।
ಹೀರಿಸುಖದಬ್ಧಿಯೊಳು ಮುಳುಗುತಲಿರುವುದದು ಮತ್ತೆ ॥
ಮೂರುಕೊಳ್ಳದ ಮಧ್ಯಕಿಳಿಯುತ ।
ಮೂರುಗುಣವಳಿದಮಲ ಸಿದ್ಧನ ।
ಚಾರುಚರಣಕೆ ನಮಿಸುವೆನು ಬಾಯೆಂದು ಕೂಗುತಿದೆ ॥ ೧೯ ॥

ಘನಮಠೇಶನು ಕಾಕನೆವದಿಂ ।
ಘನಮಹತ್ವದ ಯೋಗಸಾಧನ ।
ಕನುಕುಲಾಗಿಹ ನಾದಬ್ರಹ್ಮವ ಕುರಿತುಪೇಳಲ್ಕೆ ॥
ಅನಘ ಶ್ರೀಗುರು ಕೋರಿಸಿದ್ಧನು ।
ಮನದಿ ಸಂತೋಷವನು ತಾಳುತ ।
ಘನಮಹಿಮ ತಾಂ ಬಂದು ಹೊರಗಿನ ಬಾಗಿಲಂ ತೆರೆದು ॥ ೨೦ ॥

ಬರಲು ಶ್ರೀಗುರು ಘನಮಠೇಶನು ।
ಚರಣಕೆರಗುತ ಬಹಳ ಪರಿಕೃತಿ ।
ವಿರಚಿಸುತ ನಮ್ರವನು ಬೀರುತಸ್ತುತಿಸಿ ನಿಂದಿರಲು ॥
ಕರುಣದಿಂ ಸಿದ್ಧೇಂದ್ರ ವಚಿಸಿದ ।
ಪರಮನೇ ನೀ ಬಂದ ಬಗೆಯನು ।
ಅರುಹು ಎಂದೊಡೆ ಕರವ ಜೋಡಿಸಿ ಯೋಗಿತಾನುಡಿದಾ ॥ ೨೧ ॥

ಪ್ರಭುವೆ ನಿಮ್ಮಯ ಮಹಿಮವಾರ್ತೆಯು ।
ಪ್ರಬಲವಾಗಿಯೆ ಜಗದಿ ಪಸರಿಸೆ ।
ವಿಭುವೆ ನಿಮ್ಮಯ ಚರಣಕಾಣಲು ಬಂದೆನವಸರದಿ ॥
ಅಭವನೇ ನೀನೆನಗೆ ದಯದಿಂ ।
ಶುಭತರದ ಬೋಧನೆಯು ಬೆಸಸ್ಸೆ ।
ಭವದ ಮೂಲವ ಜವದಿಕೊರೆಯಲು ಎಂದು ನಮಿಸಿದನು ॥ ೨೨ ॥

ಗುರುವಿನಾ ಬೋಧೆಯದುವಿಲ್ಲದೆ ।
ನಿರುತಭವದಲಿ ತಿರುಗುತಿಪ್ಪುದು ।
ಸರಿಯೆ ಬ್ರಹ್ಮದ ಪಥವನರಿದಾನಂದ ಪಡೆವುದಕೆ ॥
ಮರವೆ ಮೂಲದಬೇರು ತರಿಯಲಿ ।
ಕುರು ಗುರುವಿನಾ ಬೋಧೆ ಪಡೆದೊಡೆ ।
ಪರಮನೇ ನೀನಾಗುತಿರ್ಪೆಯು ಎಂದ ಸಿದ್ಧೇಂದ್ರ ॥ ೨೩ ॥

ಕೇಳುತಲಿ ಯತಿನುಡಿದ ವಿವರವ ।
ಬಾಳದೈನ್ಯದಿ ನಮಿಸಿ ಬೋಧೆಯು ।
ಪಾಲಿಸೈ ನೀನೆನಗೆ ಸದ್ಗತಿ ಕೊಡುವ ಬೋಧವನೆ ॥
ಶೂಲಿಸಮನಹ ಘನಮಠೇಶಗೆ ।
ಆಲಸಿತ ಬೋಧೆಯೊಳು ಮಿಗಿಲಹ ।
ಸಾಲುವೇದದ ಸಾರವುಸುರಲ್ಕೇಳಿ ಮುದಗೊಂಡ ॥ ೨೪ ॥

ಧನ್ಯನಾದೆನು ಗುರುವರನೆ ನಾ ।
ಇನ್ನು ಭುವನದಿ ಎನುತ ಹರುಷದಿ ।
ಎನ್ನ ಸುಕೃತಕೆ ಎಣೆಯದಿಲ್ಲವುಯೆಂದು ವಿನಯದಲಿ ॥
ಇನ್ನು ಅಪ್ಪಣೆಗೊಡುವುದೆನುತಲಿ ।
ಸನ್ನುತನ ಕೇಳಲ್ಕೆ ಯತಿಪನು ।
ಮಾನ್ಯವಿದೆ ನೀಪೋಗಿ ಬಾರೈ ಎಂದು ಬೀಳ್ಕೊಟ್ಟ ॥ ೨೫ ॥

ಪೋಗಲಾ ಘನಮಠದ ಯತಿಶಾ ।
ಸಾಗಿದವು ಬಹುದಿನಗಳಿತ್ತಲ್ ।
ನಾಗಭೂಷಣಸಮ ಸುಸಿದ್ಧನು ಇಂತುವುಸುರಿದನು ॥
ಪೋಗುವೆನು ನಾ ತಿಮ್ಮನಗರಕೆ ।
ಸಾಗಿಬರುವುದು ನಿಖಿಲ ಭಕ್ತರು ।
ಹೀಗೆನುತ ನಡೆತಂದ ಬಹಳಾವಾದ್ಯ ರಭಸದಲಿ ॥ ೨೬ ॥

ಬರುತ ಶಿವಮ್ಮಾನಗರದ್ವೊರಬದಿ ।
ಗಿರಲು ಶ್ರೀಗುರು ಕೋರಿಸಿದ್ಧನು ।
ಭರದಿ ವಾರ್ತೆಯು ಕೇಳಿಬಂದರು ನಿಖಿಲಭಕ್ತರು ತಾವ್ ॥
ಸೆರಿದ ಬಹುವಾದ್ಯಗಳ ಗಡಣದಿ ।
ಪರಮನನು ಕಾಣುತಲಿ ಸರ್ವರು ।
ಯೆರಗಿ ಚರಣಕೆ ಸ್ತುತಿಸುತಿರ್ದರು ಬಹಳ ತೋಷದಲಿ ॥ ೨೭ ॥

ವರಸುನಾದದ ಭಜನಮೇಳದಿ ।
ಪರಿಪರಿಯು ಕೃತಿಗಳನು ಪಾಡುತ ।
ನುರಿಸುತ್ಯದಿರಾಸುಛತ್ರಾಚಾಮರವ ಪಿಡಿದು ॥
ಪುರಜನರು ಕಂಡಾಗ ಶ್ರದ್ಧದಿ ।
ಯೆರಗುತಿರ್ದರು ತಮತಮಗೆ ಶುಭ ।
ಸಿರಿಯು ಸಂಭ್ರಮಗೂಡಿ ಬರುತಲಿ ಸಾರ್ದನಾಲಯವು ॥ ೨೮ ॥

ತಾನು ಜನಿಸಿದ ಸದನದೊಳಗೇ ।
ಮಾನನಿಧಿ ಸಿದ್ಧೇಶ ಪೋಗಲು ।
ನೂನಮಿಲ್ಲದ ಪೀಠದಲಿ ಕುಳ್ಳಿರಿಸಿ ಭಕ್ತಜನ ॥
ಸಾನುರಾಗದಿ ತೆಂಗುಕರ್ಪುರ ।
ಏನು ಪೇಳಲಿ ಸಕಲ ತಂದುಂ ।
ಜ್ಞಾನಭರಿತನ ಪಾದಪೂಜೆಯ ಮಾಡ್ದರತಿಮುದದಿ ॥ ೨೯ ॥

ಮಂಗಲಾತ್ಮಕನಾದ ಸಿದ್ಧಗೆ ।
ಮಂಗಲವ ಮಾಡಿದರು ನಲಿಯುತ ।
ಸಾಂಗದಿಂ ತರಿಸಿದರು ಆರೋಗಣೆಯ ಸೊಮ್ಮುಗಳ ॥
ಪೊಂಗಿ ಷಡುರಸ ಪಾಕಗೈಯುತ ।
ಮಂಗಲಾತ್ಮಕ ಗಣಸುಭೋಜನ ।
ಪಿಂಗದಲೆ ಮಾಡಿಸಿಯೆ ದಕ್ಷಿಣೆ ತಾಂಬುಲಂಗೊಟ್ಟರ್ ॥ ೩೦ ॥

ಮುದದಿ ಮೂರುದಿನ ಕಳೆದುಪೋಗಲು ।
ವಿದಿತಗುಮ್ಮನವರು ಎನುವ ಬಹು ।
ಚದುರವೀರಾಭದ್ರನಾಗ್ನಾಟಪ್ಪ ಎಂಬುವರು ॥
ಮದವಿದೂರನ ಬಳಿಗೆ ಬರುತಲಿ ।
ಪದಕೆರಗಿ ಬಿನ್ನವನು ಕೊಡುತಾ ।
ಪದುಳದಿಂ ಗೃಹಕಾಗಮಿಸಬೇಕೆನಲು ಗುರುನುಡಿದ ॥ ೩೧ ॥

ಬರುವದಾಗದು ನಿಮ್ಮ ಗೇಹಕೆ ।
ತರುವುದೈಯೆಡೆ ಇಲ್ಲಿಗೆನ್ನಲು ।
ತ್ವರದಿ ತಂದರು ಭಕ್ಷಪಾಯಸ ಶಾಕಗಳಗೂಡಿ ॥
ಇರುವಯೆಡೆಯನು ತಂದುಕೊಡಲಿಕೆ ।
ಗುರುವು ನೋಡಿದ ಯೋಗದೃಷ್ಟಿಲಿ ।
ಪರಿಯುತಿರ್ದವು ಪುಳುವುರಕ್ತದ ಕರಣೆಗಳು ಆಗಳ್ ॥ ೩೨ ॥

ಆಸಮುದ್ರಗ ಸನ್ನಿಭಸುಸಿದ್ಧನು ।
ವಿಷಮುಗುಣಯುತ ವ್ಯಕ್ತಿಗಳಿಗೆಯು ।
ವೊಸೆದು ಮುನಿಸಿಲಿ ಶಾಪವಿತ್ತನು ಪಾಪಿಗಳೆ ನಿಮ್ಮ ॥
ಎಸೆವ ವಂಶವು ಮೂರು ಮಾಸದಿ ।
ನಸಿಸಿಪೋಗಲಿಯೆಂದು ಗುರುವರ ।
ಉಸುರೆ ಅಲ್ಲಿಹ ಜನರು ಗುರುವಿನ ಮಹಿಮೆಕೊಂಡಾಡೆ ॥ ೩೩ ॥

ಇರುತಿರಲು ಗುರು ತಿಮ್ಮನಗರದಿ ।
ಪರಮ ವೈಭವದಿಂದ ಭಕ್ತರು ।
ಬರುತಿಹರು ಸುತ್ತಿರುವ ಗ್ರಾಮದ ಜನರು ಅತಿಯಾಗಿ ॥
ಮೆರೆವುದೈ ಮಹಸಭೆಯು ನಿಶ್ಯದಿ ।
ಹರನವಡ್ಡೋಲಗದ ತೆರದೊಳು ।
ಸ್ಫುರಿಸುವುದು ಆನಂದವದು ತಾಪೇಳಲಳವಲ್ಲ ॥ ೩೪ ॥

ಸಾಧು ಶ್ರೀಗುರು ಕೋರಿ ಸಿದ್ಧನು ।
ಆದರದಿ ತನ ಶಿಷ್ಯವರ್ಗಕೆ ।
ವೇದವೇದಾಂತದೊಳಗಿರುತಿಹ ಗೋಪ್ಯವಿಷಯವನು ॥
ಸಾದರದಿ ತಿಳುಪುತಲಿ ಮನಸಿನ ।
ಭೇದಭಾವವನಳಿಸಿ ಯೋಗದ ।
ಸಾಧನವನರುಹಿದನು ಇದುರಾಹಸ್ಯವಿಂತೆಂದು ॥ ೩೫ ॥

ದಿನಗಳೆಂಟವು ಗತಿಸಿಪೋದವು ।
ಮುನಿಪನೆಂದನು ಶಿಷ್ಯವರ್ಗಕೆ ।
ಎನಗೆ ಈ ಅಬ್ದದಲಿ ಶಿವನಾಯಾತ್ರೆ ಇರುತಿಹುದು ॥
ಅನುನಯದಿ ನೀವೆಲ್ಲಗೂಡುತ ।
ಮಿನುಪ ಅಶ್ವಿಜ ಕೃಷ್ಣ ಸಪ್ತಮಿ ।
ದಿನಕೆ ಬರುವದು ಎಂದು ಅಪ್ಪಣೆಮಾಡಿ ಬೀಳ್ಕೊಟ್ಟ ॥ ೩೬ ॥

ಪರಮತರದೀ ಯತಿಪುರಾಣವ ।
ನುರುಮುದದೊಳೋದುವರಿಗಂ ಪೇ ।
ಳ್ವರಿಗೆ ಆಲಿಸುವರಿಗೆ ಸದ್ಗುರು ಕೋರಿ ಸಿದ್ಧೇಶಂ ॥
ಚಿರತರಾಯುರರೋಗ್ಯವೈಸಿರಿ ।
ಪರಮ ವಿದ್ಯೆ ಸುಭಕ್ತಿ ಮೊದಲಾ ।
ಗಿರುವ ಸತ್ಫಲಗಳನು ಕರುಣಿಸುತಿರ್ಪನಿದು ದಿಟವು ॥ ೩೭ ॥

ಅಂತು ಸಂಧಿ ಹದಿನಾಲ್ಕಕ್ಕಂ ಪದನು ೬೪೬ ಕ್ಕಂ

ಮಂಗಲಂ ಮಹಾ ಶ್ರೀ ಶ್ರೀ ಶ್ರೀ

॥ ಶ್ರೀಗುರು ಕೋರಿ ಸಿದ್ಧೇಶ್ವರಾಯನಮಃ ॥



# ಹದಿನೈದನೆಯ ಸಂಧಿ

ಸೂಚನೆ— ವಿನುತ ತೋಟಪ್ಪಯ್ಯ ಸ್ವಾಮಿಗೆ ।
ಘನತರದ ವೇದಾಂತ ಬೋಧಿಸಿ ।
ಮನುಮಥಾರಿಯ ಲೋಕಕ್ಕೈದಿದ ಕೋರಿ ಸಿದ್ಧೇಂದ್ರ ॥

ಪುರದಹನ ಸ್ಮರಕಾಲಸಂಹರ ।
ಸುರಪನುತಪದ ನೀಲಕಂಧರ ।
ನರಶರದ ಸುಖಮೂಲಮಂದಿರ ಶೂಲಧರದೇವ ॥
ಶರಣಕುಲ ಪರಿಪಾಲದುರ್ಭವ ।
ಹರಣಮುಹಿಮ ವಿಶಾಲ ಶಿವನಿ ।
ಮರ್ಗರಣ ಸಾಂಬಸುಶೀಲ ಎಮ್ಮನು ಪಾಲಿಸೈ ದೇವ ॥

ಗುರುವಚನವನು ಕೇಳ್ದು ಸರ್ವರು ।
ಮರುಕಗೊಳ್ಳುತಲಿರಲು ಅವರಿಗೆ ।
ಅರುಹಿದನು ನೀವ್ ಬಳಲಬೇಡಿರಿ ಎಂದಿಗಾದರೆಯು ॥
ತೆರಳುವದು ಈ ಲೋಕದಿಂದಲಿ ।
ನರರಿಗಿದು ತಾನೈಜವಿರೆಯಿದ ।
ನರಿದು ಪರಮಧ್ಯಾನದಿರುತಲಿ ಪೋಗ್ವುದು ಚಿತೆಂದ ॥ ೨ ॥

ಭೂತಪಂಚಕಮಿಳಿತದಿಂದಲಿ ।
ಆತುಗೊಂಡಿಹ ಗಾತ್ರವಿದಕೆ ಸು ।
ಪ್ರೀತಿ ಮಾಡಲು ಬಾರದೈ ಅಜ್ಞಾನವಶದಿಂದ ॥
ಸಾತಿಶಯದಿಂ ಅರಿದು ನೋಡಲು ।
ಯಾತಕೆಯು ಸಲ್ಲದ ಶರೀರವ ।
ವೋತು ನಂಬಿದ ಪ್ರೀತಿಶಿವನಲಿ ನೆಲಸಿಬಾಳುವಧು ॥ ೩ ॥

ಮರದೊಳಗೆ ಪಕ್ಷಿಗಳು ರಜನಿಲಿ ।
ನೆರೆದು ನಿಖಿಲವು ಗೂಡಿಯಿರುತಲಿ ।
ಪರಿದುಪೋಗ್ವವು ಬೆಳಗಿನಲಿ ತಮಯಿಚ್ಛೆಯಿದ್ದೆಡೆಗೆ ॥
ಪರಿಯೆಯಿಂತಿಹುದದುವೆ ಕಾರಣ ।
ಮರುಗಬಾರದು ಬಲ್ಲ ಪ್ರಜ್ಞರು ।
ಹರನ ಸ್ಮರಣದಿ ನಿರುತರಾಗುತ ಪಡೆವದವಿರಳವ ॥ ೪ ॥

ಗುರುಕುಲೇಂದ್ರನು ನೀತಿಬೋಧವ ।
ನರುಹಿ ಪಯಣಕೆ ಅನುವುಗೊಂಡಿರೆ ।
ತರಿಸಿಪೂಸರ ತೆಂಗುಕರ್ಪೂರ ಗಂಧಮೊದಲಾಗಿ ॥
ಗುರುಚರಣಕರ್ಚನೆಯನೆಸಗುತ ।
ನೆರೆಸಿ ಬಹುವಿಧವಾದ್ಯರವದಿಂ ।
ಪರಮನನು ಕಳುಹಿದರು ಮೇಲ್ತರ ಭಜನೆಗೈಯುತಲಿ ॥ ೫ ॥

ಒಡೆಯ ಶ್ರೀಗುರು ಕೋರಿಸಿದ್ಧನು ।
ನಡೆದುಬರೆ ನಾಲ್ವಾರ ಪುರಕಂ ।
ವಡನೆ ಬಂದರು ಇದುರು ಬಹುಜನಕೂಡಿಕೊಳ್ಳುತಲಿ ॥
ಸಡಗರದಿ ಕರತಂದು ಯತಿಪನ ।
ಬಿಡುತ ಮಠದೊಳು ಚರಣಕೆರಗುತ ।
ಮಾಡಿದರು ಘನಪ್ರಾರ್ಥನೆಯನುರುತರದ ಭಕ್ತಿಯೊಳು ॥ ೬ ॥

ಸ್ವಾಮಿ ಶ್ರೀಗುರು ಕೋರಿಸಿದ್ಧನು ।
ಕಾಮಜಿತ ಮಗು ತೋಟಪ್ಪಯ್ಯನ ।
ರಾಮಣೀಯಕ ರಾಜಸಾಹೇಬನನು ಭರದಿಂದ ॥
ಪ್ರೇಮದಿಂದಲಿ ಕರೆದು ಪೇಳಿದ ।
ಸೋಮಚೂಡನ ಸಭೆಗೆ ಪೋಗುವ ।
ನೇಮವನು ಆಶ್ವೀಜ ಕೃಷ್ಣಾ ಸಪ್ತಮಿಯೆಂದು ॥ ೭ ॥

ಸದಯ ಯತಿಪನು ಮತ್ತೆ ನುಡಿದನು ।
ಮುದವೆರಸಿ ನೀವೆಲ್ಲಗೂಡುತ ।
ಕದಲದಲೆ ವೊಮ್ಮನದಿ ಮಠದಭಿಮಾನ ವಹಿಸುತಲಿ ॥
ವದಗಿಬರುತಿಹ ಭಕ್ತ ನಿಕರಕೆ ।
ಪುದಿದ ತೋಷದಿ ಮಾನಕೊಡುವುದು ।
ಇದನು ಮರೆಯದೆ ನಡೆಸುವುದು ನೀವ್ ಸತತಕಾಲದಲಿ ॥ ೮ ॥

ಕೇಳುತಲಿ ಗುರುಪೇಳ್ದ ವಿವರವ ।
ಮೇಲುಮತಿ ತೋಟಪ್ಪ ನುಡಿದನು ।
ಜಾಳುಮಾಡದೆ ತಮ್ಮನುಜ್ಞೆಯ ತೆರದಿ ನಡೆಯುವೆವು ॥
ಕೇಳುವೆನು ಮತ್ತೊಂದು ವಿಷಯವ ।
ಬಾಳಕೃಪೆಯಿಂದಳಿದು ಎನ್ನೊಳು ।
ಪೇಳುವುದು ವೇದಾಂತ ಸಾರದಮುಖ್ಯವಿಷಯವನು ॥ ೯ ॥

ಮಗನೆ ನಿನ್ನಗೆ ಮೊದಲು ತಿಳುಹಿದ ।
ಬಗೆಯು ಅದು ಬಹುಗೋಪ್ಯವಾಗಿಹ ।
ನಿಗಮ ಶಿರದರ್ಥವನು ವಿವರದಿ ಪೇಳಿಮುಗಿಸಿದೆನು ॥
ಸೊಗಸಿನಿಂದುಸುರುವೆನು ಮತ್ತೆಯು ।
ಸುಗಮದಿಹ ಮುಖ್ಯಾಂಶ ವಿಷಯವ ।
ಬಗೆದು ನಡೆಯ್ಯೆ ನಿತ್ಯವಸ್ತುವು ನೀನೆ ಆಗುವಿಯೊ ॥ ೧೦ ॥

ಮತ್ತೆ ಈಹಾಂಕಾರಸುಖಿ ಕೇಳ್ ।
ಮತ್ತೆದುಃಖಿಯು ಎಂದು ದೇಹದಿ ।
ಮತ್ತೆಕೂಡಿಹ ಈ ಜಗತ್ಯವು ಎನ್ನದೆಂದು ತಿಳಿ ॥
ಇತ್ತಲರಿ ಹೂವಿನೊಳು ಪರಿಮಳ ।
ಮತ್ತೆ ಐಕ್ಯದ್ದೆಡೆಯು ಹೂವಿಗೆ ।
ಮತ್ತೆ ಬೇರಿಹುದಾ ಪರಿಯು ನೀಂ ಬ್ರಹ್ಮವೆಂದು ತಿಳಿ ॥ ೧೧ ॥

ನಾನಗುಣಗಳು ನಾನವಿಷಯವು ।
ನಾನಚಿಂತೆಯು ದೇಹದೊಳಗೆಯು ।
ನಾನು ಸಾಕ್ಷ್ಯಾಗಿರಲು ನನ್ನಲಿ ಜನನವೆಂದು ತಿಳಿ ॥
ನಾನು ಇಂದ್ರಿಯ ವ್ಯವಹರವು ಕೇಳ್ ।
ಮಾನಬುದ್ಧಿಯ ಸುಖಕೆ ಸಂಶಯ ।
ತಾನು ಸಾಕ್ಷಿಯು ಎನ್ನಲೇ ಅಹವೆಂದು ತಿಳಿನೀನು ॥ ೧೨ ॥

ಮನಸಿನಿಂದಲಿ ಜಗವು ತೋರ್ಪುದು ।
ಮನಸಿನಿಂದಲಿ ಜಗವು ಲಯಿಪುದು ।
ಮನಸಿನಿಂದಲಿ ತೋರುತಿಹುದ್ಯೆ ನಾನರೂಪಾಗಿ ॥
ಮನದ ಮುಖದಲಿ ಸಂಶಯಂಗಳು ।
ಮನಸಿನಿಂದಲೆ ಖಿಶ್ಚಯಂಗಳು ।
ಮನವು ತಾನಲ್ಲೆಂದು ತಿಳಿಯ್ಯೆ ಎಂದ ಸಿದ್ಧೇಂದ್ರ ॥ ೧೩ ॥

ಕೇವಲನು ತಾ ಸರ್ವಸಾಕ್ಷಿಯು ।
ಕೇವಲನು ತಾ ಸರ್ವಕಾರಣ ।
ಕೇವಲನು ತಾ ತೇಜೋರೂಪನು ಕೇವಲಾತ್ಮನು ತಾ ॥
ಕೇವಲನು ಓಂಕಾರ ರೂಪನು ।
ಕೇವಲನು ನಿರ್ಗುಣ ಸುನಿರವಯು ।
ಕೇವಲನೆ ನಾನೆಂದು ತಿಳಿಯ್ಯೆ ಮಗುವೆ ನೀನೆಂದ ॥ ೧೪ ॥

ಉದಕದೊಳು ತೋರ್ವಂದ ಬಿಂಬವು ।
ಉದಕದುಪರಿಲಿ ಪೊಳೆವ ಬಿಂಬಕೆ ।
ಅದಕೆ ಬೇರೇನಿಲ್ಲವದು ಕರೆಯೆರಡು ಆಗಿಹುದು ॥
ಉದಕ ಅಟ್ಟಿಸಿದಿಂದೆ ನಿಜ ಬಿಂ ।
ಬದುವೆ ತಾನೇ ವಂದೆ ಆಪರಿ ।
ಅದುವೆ ತೋರ್ವ ಶರೀರಯೆನಗಿಲ್ಲೆಂದು ಭಾವಿಸುನೀ ॥ ೧೫ ॥

ಈ ವಿಧದ ಮುಖಾಂಶ ಬೋಧವ ।
ಪಾವನಾತ್ಮಕ ಪೇಳುತೆಂದನು ।
ಸಾವಧಾನದಿ ತಿಳಿದು ಅಹಂಬ್ರಹ್ಮಾಸ್ಮಿಯೆನ್ನುತಿಹ ॥
ಕೇವಲದ ನಿಜತತ್ವ ನಿನ್ನೊಳು ।
ಆವಗಲು ಮನನಾಗುತಿರಲಿಕೆ ।
ದೇವದೇವನೆ ನಾನೆ ಎಂಬುವ ಪ್ರತಿಯು ನೆಲಸಿಹುದು ॥ ೧೬ ॥

ಇಂತು ನೆರೆಶ್ರುತಿ ಸಾರವಿಷಯುವ ।
ನಂತು ಪೇಳಲು ಸಿದ್ಧಯತಿಪನು ।
ಶಾಂತ ತೋಟಪ್ಪಯ್ಯ ಪಿರಿದಹ ತೋಷಪೊಂದಿದನು ॥
ಸಂತವರನಾ ಚರಣಕೆರಗುತ ।
ನಿಂತುಕರದ್ವಯು ಮುಗಿದು ವಚಿಸಿದ ।
ಎಂತು ನಿಮ್ಮಯ ಬಯುಕೆಯೆನೆ ಗುರುನುಡಿದರಾಜನಿಗೆ ॥ ೧೭ ॥

ಮಗುವೆ ಲಾಲಿಸುಯೆಮ್ಮ ವಾಂಛಿತ ।
ಜಗವ ಜನದಿಂ ತ್ಯಜಿಸಿಪೋಗುವೆ ।
ಸೊಗಸಿನಾಶ್ವಿಜ ಬಹುಳ ಸಪ್ತಮಿ ನಾಳಿಗಿರುತಿಹುದು ॥
ಅಘಹರನ ಯಾತ್ರೆಯೆದು ವುದಯಕೆ ।
ತಗುಲಿರುವದಶ ಘಟಿಕ ಸಮಯಕೆ ।
ಬಗೆಯೆ ಈತನು ವುಳಿದುದಿವ್ಯಾಗಾತ್ರದಲಿ ಬೆರೆವೆ ॥ ೧೮ ॥

ಗುರುತಿಲಕ ಈ ಪರಿಯೊಳ್ನುಡಿಯಲು ।
ಪರಮ ತೋಟಪ್ಪಯ್ಯ ಸ್ವಾಮಿಯು ।
ನೆರೆಸುಮತಿ ರಾಜೇಶವುಭಯರು ಕೂಡಿ ಅವಸರದಿ ॥
ಬರೆದು ಲಿಪಿ ಆಳ್ಗಳಿಗೆ ಈಯುತ ।
ಕರೆಸಿಕೊಂಡನು ದೂರಗ್ರಾಮದ ।
ಲಿರುವ ಶಿಷ್ಯರತಂಡ ಬಂದುದು ಅಪರಿಮಿತವಾಗಿ ॥ ೧೯ ॥

ಬಂದು ಶಿಷ್ಯರನಿಕರ ಭಕ್ತಿಲಿ ।
ತಂದೆ ಶ್ರೀಗುರು ಕೋರಿ ಸಿದ್ಧಗೆ ।
ವಂದಿಸುತ ಕಂಬನಿಯ ಸುರಿಸೀ ನುಡಿದುದಖಿಲ ಜನ ॥
ಇಂದು ನಮ್ಮನು ತೊರೆದು ಪೋಗ್ವಿರಿ ।
ಎಂದ ಮಾತನು ಕೇಳ್ದು ನುಡಿದನು ।
ಸಂದೆಹವ ಗೊಳಬೇಡಿ ದೃಶ್ಯದಿ ಇರುವೆನೀ ಸ್ಥಲದಿ ॥ ೨೦ ॥

ಪರಮ ಪಾಪಿಯು ಜನರು ಪೆಚ್ಚುತ ।
ಲಿರುವರ್ಕೆ ಮುಂದಿನ್ನು ಅವರಾ ।
ಗರುವ ಮುರಿಯಲು ಶರಣಬಳಗವ ಕೂಡಿಕೊಳ್ಳುತಲಿ ॥
ಬರುವೆನೈ ನಾನವರ ಕೂಡಿಯೆ ।
ಮರೆಯದಿರಿ ಈವಚನ ನೀವ್ಗಳು ।
ಹರುಷದಿಂದಲಿ ಹರನ ಸ್ಮರಿಸುತಲಿರ್ಪುದುರೆಯೆಂದು ॥ ೨೧ ॥

ಅನುಪಮ ಶ್ರೀಕೋರಿ ಸಿದ್ಧನು ।
ಜನಗಳಿಗೆ ಈ ಪರಿಯೊಳ್ ತಿಳುಹಿಸೆ ।
ದಿನಪ ಬೇಸರಗೊಂಡು ಪಶ್ಚಿಮಗಿರಿಯನೇರಿದನು ॥
ಎನಿಸು ಯೆನ್ನಯ ಪ್ರಕರ ಬೀರಲು ।
ಎನಿಸು ಭಯವಿಲ್ಲದಲೆ ತಮವದು ।
ಎನಗೆ ಬೆಂಬಲ ಬಿಡದುಯೆನುತಲಿ ಹಾರ್ದನಬ್ಧಿಯಲಿ ॥ ೨೨ ॥

ಅತ್ತ ರವಿತಾನಡಗುತಿರಲಿಕೆ ।
ಕತ್ತಲೆಯು ಪಾಸಣಿಸಿ ಭುವನದ ।
ಸುತ್ತಲಿರುತಿಹ ದಿಶಗಳದುವೇ ಗೋಚರಿಸದಿರಲು ॥
ಇತ್ತ ನೆರೆದಿಹ ಶಿಷ್ಯವೃಂದವು ।
ವುತ್ತಮೋತ್ತಮ ಕೃತಿಯ ಪಾಡುತ ।
ಚಿತ್ತಶುದ್ಧಿಲಿ ಭಜನೆಗೂಡ್ದರು ಯತಿಪನಾ ಬಳಿಯೊಳ್ ॥ ೨೩ ॥

ಮಾಡುತಿರೆ ಭಜನೆಯನು ಭಕ್ತಿಯೊಳ್ ।
ಮೂಡಿದನು ರವಿಪೂರ್ವ ಗಿರಿಯೊಳ್ ।
ನೋಡುವೆನು ಶ್ರೀಕೋರಿ ಸಿದ್ಧನ ಮಹಿಮೆಯೆಂದೆನುತ ॥
ಆಡಲೇಂ ಅತಿಜನರ ಸಂದಣಿ ।
ಗೂಡುತಿರೆ ಆ ಯತಿಪನೂ ತಾ ।
ನಾಡಿದಾ ಸಮಯವನು ಈಕ್ಷಿಸುತಿರ್ದರಾಗ ಜನ ॥ ೨೪ ॥

ಧರಣಿ ಪತಿ ಶ್ರೀಶಾಲಿವಾಹನ ।
ವರಶಕವು ಪದಿನೇಳು ಶತಮೋ ।
ಲಿರುವ ತೊಂಭತ್ತೇಳು ರಾಕ್ಷಸನಾಮ ವತ್ಸರದ ॥
ಪರಮ ಅಶ್ವಿಜಮಾಸ ಕೃಷ್ಣದಿ ।
ಬೆರೆದ ಸಪ್ತಮಿ ಗುರುಸುವಾರದಿ ।
ಇರುವ ಪುಷ್ಯಸುತಾರ ವರಧನುರ್ಲಗ್ನ ಮಧ್ಯದೊಳು ॥ ೨೫ ॥

ಭವವಿನಾಶನ ಕೋರಿ ಸಿದ್ಧನು ।
ಶವಕದಲಿ ತಾಪೇಳ್ದ ಪರಿಯಲಿ ।
ಶವೆಯಿರದೆ ದಶಘಟಿಕ ಸಮಯವು ಕೂಡಿಕೊಂಡಿರಲು ॥
ಶಿವನ ತೇಜದಿ ಸಿದ್ಧ ಯತಿಪನು ।
ಜವದಿ ಐಕ್ಯವ ಪೊಂದುತಾಗಳೆ ।
ಶಿವಶಿವೆನ್ನುತ ಘೋಷಮಾಡ್ದರು ನಿಖಿಲಭಕ್ತಜನ ॥ ॥ ೨೬ ॥

ವರಸುಪೀಠನಿ ಕುಳಿತು ಗುರುವರ ।
ಹರಣವನು ತ್ಯಜಿಸಲ್ಕೆ ಭಕ್ತರು ।
ಸುರಿಸಿದರು ಪೂವರುಷ ಬಹುಪರಿಯಾಗಿ ಗಾತ್ರಕ್ಕೆ ॥
ತರಿಸಿ ಕರ್ಪುರ ತೆಂಗು ಮಾಲೆಗ ।
ಳ್ನಿರೆಸುಗಂಧದ ಧೂಪಸುಡುತಲಿ ।
ಪರಮನಾ ಕಳೆಬರಕೆ ಮಾಡ್ದರು ಪೂಜೆವಿಧಿಯಿಂದ ॥ ೨೭ ॥

ಹಾಡಿದರು ಮಂಗಲದ ಪದಗಳ ।
ಮಾಡಿದರು ಘನಸಾರದಾರುತಿ ।
ನಾಡೆ ಭಕ್ತರು ಸ್ವಾಮಿಸಲಹೈಯೆಂದುದಲ್ಲದಲೆ ॥
ಬೇಡಿಕೊಂಡರು ಮನಬಯಕೆ ಕೈ ।
ಗೂಡಿಸೈ ಎಂದೆನುತಲಾಗಳ್ ।
ನೋಡಿಕೋಟಪ್ಪಯ್ಯ ಸ್ವಾಮಿಯು ತೋಷಮನದಿಂದ ॥ ೨೮ ॥

ಮೆರೆವ ಸಿಂಗರಮಂಟಪದೊಳುಂ ।
ಇರಿಸಿ ಗುರುವಿನ ಗಾತ್ರಮುದದಿಂ ।
ತರಸಿ ಬಹುಪರಿವಾದ್ಯಗಳ ನುಡಿಸುತ್ತ ವೈಭವದೆ ॥
ಮೆರೆಸೆ ಪುರದೊಳು ಸ್ತ್ರೀಯರಾ ಬಹು ।
ಪುರುಷರಖಿಲರು ಮಠಕೆ ಬಂದುಂ ।
ಪರಮನಾ ಕಳೆಬರವನಿಳುಹುತ ಬಳಿಕತಾನಿತ್ತ ॥ ೨೯ ॥

ಮಂಗಲಾತ್ಮನ ವರಸಮಾಧಿಗೆ ।
ಸಾಂಗವಾಗಿಹ ವಸ್ತ್ರ ಶರಿಸುತ ।
ಪೊಂಗಿರಚಿಸಿದರಾಗ ಶೈವಾಗಮದ ವಿಧಿಯಿಂದ ॥
ಸಾಂಗವಾಗಿಯೆ ಪ್ರಣವಲಿಖಿಸುತ ।
ತುಂಗಯತಿ ಶ್ರೀಕೋರಿ ಸಿದ್ಧನ ।
ಅಂಗವನು ವಳಗಿಡುತ ಮಾಡ್ದರು ಮಂಗಳಾರತಿಯ ॥ ೩೦ ॥

ಶೀಲಗುರುವಿನ ವರಸಮಾಧಿಯು ।
ಬಾಳಸಂಭ್ರಮದಿಂದ ಜರುಗಲು ।
ಪೇಳಲೇಂ ಅಗಣಿತ ಹಣವಂ ದಾನವಾಡುತ ಮೇಣ್ ॥
ಬಾಳರುಚಿಕರವಾದ ಷಡ್ರಸ ।
ಮೇಳಗೊಂಡಿಹ ಭೋಜನವಕೊಡೆ ।
ಬಾಳಜನಗಳು ತೃಪ್ತಿಪೊಂದುತ ಹರಸಿದರು ನಲಿದು ॥ ೩೧ ॥

ದೂರದಿರುತಿಹ ಪುರದಜನಗಳು ।
ಧೀರ ಶ್ರೀಗುರು ತೋಟಪ್ಪಯ್ಯಗೆ ।
ಸಾರಿನಮಿಸುತ ಪಡೆದನುಜ್ಞೆಯ ಸಾರಿದರ್ ಸ್ಥಲಕೆ ॥
ಊರಲಿಹ ಮುಖ್ಯಸ್ಥ ಜನಗಳು ।
ಸೇರಿ ಗುರುವರನಿಂಗೆ ಪೇಳ್ದರು ।
ಭಾರ ನಿಮ್ಮಗೆ ಇರುವುದೈ ಈ ಸ್ಥಲವ ಬೆಳೆಸುವುದು ॥ ೩೨ ॥

ಇಂತು ಸರ್ವರು ನುಡಿಯುತಿರಲಿಕೆ ।
ಶಾಂತಮನ ತೋಟಪ್ಪ ಸ್ವಾಮಿಯು ।
ಅಂತರಂಗದಿ ಶಿವನ ಸ್ಮರಿಸುತ ನುಡಿದನಖಿಲರಿಗೆ ॥
ಎಂತು ನಾಮಾಡುವೆನು ಯಗ್ಗಳ ।
ಭ್ರಾಂತಿಹರ ಶ್ರೀಕೋರಿ ಸಿದ್ಧನು ।
ನಿಂತುಮಾಡ್ವನು ತಾನೆಯೆಂದುಂ ಪೇಳ್ದ ವಿನಯದಲಿ ॥ ೩೩ ॥

ದಿನದಿನಕೆ ಗುರು ತೋಟಪ್ಪಯ್ಯನ ।
ಘನತೆ ಪೆಚ್ಚುತಲಿರಲು ಭುವನದಿ ।
ಎನಿತು ಪೇಳಲಿ ಕೋರಿಸಿದ್ಧನ ಸಮನುಯೆನಿಸಿದನು ॥
ವಿನುತರಾಜೇಶ ಸಮಶರಣನ ।
ಅನುಮತಿಯುಗೊಳುತಾಗ ಈರ್ವರು ।
ಜಿನುಗು ಗುಣತ್ಯಜಿಸುತಲಿ ವರ್ತಿಸೆ ಯಶಬೆಳೆಯೆ ಜಗದಿ ॥ ೩೪ ॥

ಗುರುಸುಸಿದ್ಧನು ಐಕ್ಯವಾದಾ ।
ವರುಷದಲಿ ಗುಳ್ಯಾಳವೆಂಬುವ ।
ಪುರದಬಡಿಗರ ಭಕ್ತನಿಗೆ ಶಿವಪುರದ ಸನುವರಗೆ ॥
ಮೆರೆವ ನಾಲ್ವಾರ್ ಗ್ರಾಮದೊಳಗೆಯು ।
ಇರುವ ಗುರುಲಿಂಗಮ್ಮ ದೇವಿಗೆ ।
ಮೆರೆವ ತನ್ನಾದೇಹ ತೋರಿಸಿ ಬಯಕೆ ಸಲಿಸಿದನು ॥ ೩೫ ॥

ಹೀಗೆ ಅಗಣಿತ ಮಹಿಮೆ ತೋರುತ ।
ಸಾಗಿಪೋಗಲು ಕೆಲವುದಿನ ಭವ ।
ರೋಗನಾಶಕ ತೋಟಪ್ಪಯ್ಯನು ಮಠದಿ ದಾಸೋಹ ॥
ಸಾಗಿಸುತ ಬರುತಿರುವ ಜನಕೆಯು ।
ಮೇಗೆನಿಪ ಕೀರ್ತಿಯನು ಬೆಳೆಸುತ ।
ನಾಗಭೂಷಣನಾ ಸ್ಮರಣೆಯೊಳೆ ಸತತವಿರುತಿರ್ದಂ ॥ ೩೬ ॥

ಗುರುವರ ಶ್ರೀ ಕೋರಿಸಿದ್ಧನ ।
ಚರಿತವಿದು ನಾಂ ಪೇಳ್ದೆ ಭಕ್ತಿಯೊಳ್ ।
ಅರಿದು ನೋಡಲು ವಿಬುಧಜನ ಇದರೊಳಗೆ ಶ್ಲಾಘಿಸುವ ॥
ಪರಿಯು ಆವುದು ಇಲ್ಲವೆನುತಂ ।
ಜರಿಯಬೇಡಿರಿ ಎನುತ ಬೇಡುವೆ ।
ಅರಿಯೆ ಹಂಸಕ್ಷೀರನ್ಯಾಯದೆ ಮನ್ನಿಪುದು ದಯದಿ ॥ ೩೭ ॥

ವಿದಿತ ಪದಿನೆಂಟೂ ಶತದಮೇಲ್ ।
ವಡಗಿದೆಪ್ಪತ್ನಾಲ್ಕು ಶಕದೊಳು ।
ವಿದಿತನಂದನ ವತ್ಸರಾ ಭಾದ್ರಪದ ಶುಕ್ಲದಲಿ ॥
ಪದುಳದಿಂ ಪ್ರತಿಪದದೆ ಕೂಡಿಹ ।
ಚದುರ ಗುರುವಾಸರದಿ ಕೃತಿಯನು ।
ಪುದಿದ ತೋಷದಿ ಬರೆದು ಮುಗಿಸಿತು ಸಿದ್ಧನಾದಯದಿ ॥ ೩೮ ॥

ಕೃತಿಯ ರಚಿಸಿದರಾರು ಎಂದೆನೆ ।
ಕ್ಷಿತಿಯೊಳತಿ ಜಸವಾಂತು ಶೋಭಿಸಿ ।
ಮತಿಯುತರ ಗಡಣವನು ತನ್ನೊಳು ಕೂಡಿಕೊಂಡಿರವ ॥
ಪತಿತಪಾವನ ತಿಮ್ಮನಗರದಿ ।
ಸ್ಥಿತನು ತಾ ಸಿದ್ಧಪ್ಪ ಶಾಸ್ತ್ರಿಯು ।
ನುತಿಸಿ ಶ್ರೀಗುರು ಕೋರಿಸಿದ್ಧನ ಚರಿತೆಯನು ಬರೆದ ॥ ೩೯ ॥

ಸತತವೀಕೃತಿಯೋದ್ವ ಕೇಳ್ವಗೆ ।
ಅತುಲಸುಖ ಸಂಪದವು ಹರುಷವು ।
ವಿತತ ವೈಭವವಖಿಳ ಘನಭರಿತಾಗಿಯೊಪ್ಪುವುದು ॥
ಕ್ಷಿತಿಯ ಜನಸ್ತುತಿ ಪಾತ್ರಗಿರಿಜಾ ।
ಪತಿ ಕರುಣವತಿ ಸುಲಭವಾಗ್ವುದು ।
ಯತಿಪ ಶ್ರೀ ಸಿದ್ಧೇಂದ್ರ ಮಹಿಮೆಯು ಸತ್ಯಸಿದ್ಧಾಂತ ॥ ೪೦ ॥

ಮಂಗಲಂ ಗುರು ಕೋರಿಸಿದ್ಧಗೆ ।
ಮಂಗಲಂ ಘನ ಲಿಂಗರೂಪಗೆ ।
ಮಂಗಲಂ ಶಿವಯೋಗ ಯುಕ್ತಗೆ ಭಕ್ತವತ್ಸಲಗೆ ॥
ಮಂಗಲಂ ಕರುಣಾಪಯೋಧಿಗೆ ।
ಮಂಗಲಂ ಲೀಲಾವಿನೋದಗೆ ।
ಮಂಗಲಂ ನಾಲ್ವಾರದಾಯತಿ ಪುಂಗವಗೆ ಘನಗೆ ॥ ೪೧ ॥

ಪೆರಮಾತರದೀ ಯತಿಪುರಾಣವ ।
ಸುರುಮುದದೊಳೋದುವರಿಗಂ ಪೇ ।
ಳ್ವರಿಗೆ ಆಲಿಸುವರಿಗೆ ಸದ್ಗುರು ಕೋರಿ ಸಿದ್ಧೇಶಂ ॥
ಚಿರಪರಾಯುರರೋಗ್ಯವೈಸಿರಿ ।
ಪರಮ ವಿದ್ಯೆ ಸುಭಕ್ತಿ ಮೊದಲಾ ।
ಗಿರುವ ಸತ್ಫಲಗಳನು ಕರುಣಿಸುತಿರ್ಪನಿದು ದಿಟವು ॥ ೪೨ ॥

ಅಂತು ಸಂಧಿ ಹದಿನೈದಕ್ಕಂ ಪದನು ೬೮೮ ಕ್ಕಂ

ಮಂಗಲಂ ಮಹಾ ಶ್ರೀ ಶ್ರೀ ಶ್ರೀ

★ ಸಮಾಪ್ತಂ ★



॥ ಶ್ರೀ ಗುರುಶಾಂತೇಶ್ವರಾಯನಮಃ ॥

# ಶ್ರೀ ನಾಲ್ವಾರ ಕೋರಿ ಸಿದ್ಧೇಶ್ವರನ ತ್ರಿವಿಡಿಯು

ಜಯಜಯ ಜಗದೀಶ ಜಯಜಯ ಅಘಹರನೆ ।
ಜಯಜಯತು ನಿಗಮತತಿಗಳಿಗೆ ದುರ್ಲಭನೆ ॥
ಜಯ ಕೋರಿಸಿದ್ಧ ದಯವಾಗು ॥ ೧ ॥

ಬಸವನ ಭಕ್ತಿಯು ಶಶಿಧರನ ಜ್ಞಾನವು ।
ಅಸಮಗಣಕುಲ ವೈರಾಗ್ಯ ಇವು ಮೂರು ।
ವಶವಾದ ಸಿದ್ಧ ದಯವಾಗು ॥ ೨ ॥

ಭೂತಕಾಯವಮೆಚ್ಚಿ ಘಾತಕತನದಿಂದ ।
ಪಾತಕವಮಾಡಿ ಪಾವನರಿಯದೆ ಕೆಟ್ಟೆ ।
ಭೂತೇಶ ಸಿದ್ಧ ದಯವಾಗು ॥ ೩ ॥

ಮಲಿನದೇಹವ ಮೆಚ್ಚಿ ಬಲುಗರ್ವವದು ಹೆಚ್ಚಿ ।
ಕಲುಹೃದಯನಾಗಿ ಹೊಲಬನರಿಯದೆ ಕೆಟ್ಟೆ ।
ಮಲಹರ ಸಿದ್ಧ ದಯವಾಗು ॥ ೪ ॥

ಡಂಬಕಾಯವ ಹಿಡಿದು ನಂಬದೆ ನಿಮ್ಮಡಿಯ ।
ಹಂಬಲವ ಮರೆದು ಬೆಂಬಿಡದೆ ಭವಭವದಿ ।
ಶಂಭು ಶಿದ್ಧೇಶ ದಯವಾಗು ॥ ೫ ॥

ಮನಬುದ್ಧಿ ಚಿತ್ತವು ಬಿನಗುವಹಂಕಾರ ।
ವನುದಿನ ನಿಮ್ಮ ನೆನಿಯಲರಿಯದೆ ಕೆಟ್ಟೆ ।
ಚಿನುಮಯ ಸಿದ್ಧ ದಯವಾಗು ॥ ೬ ॥

ಏಳು ವ್ಯಸನಗಳೆನ್ನ ಬಾಳಲೀಯದೆ ಬಲು ।
ದಾಳಿಯನೆ ಮಾಡಿ ಬಳಸುತ್ತಲಿಹವು ।
ಭಾಳಾಕ್ಷ ಸಿದ್ಧ ದಯವಾಗು ॥ ೭ ॥

ಹತ್ತತ್ತು ಜನ್ಮದೊಳು ಮತ್ತೆ ಜೀವನ ಶಿರವು ।
ಕತ್ತರಿಸಲಾಗಿ ಇತ್ತ ಭವದೊಳು ಬಂದೆ ।
ಕರ್ತೃ ಸಿದ್ಧೇಶ ದಯವಾಗು ॥ ೮ ॥

ಪಂಚವಿಷಯಂಗಳಿಂ ಸಂಚರಿಸಿ ನಾನಿಮ್ಮ ।
ಚಿಂತಿಯನೆ ಮರೆದೆ ಹಂಚಿಕೆಯ ತೋರು ।
ಪಂಚಾಕ್ಷರಿಯ ಸಿದ್ಧ ದಯವಾಗು ॥ ೯ ॥

ಆಶೆಯ ಶೂಲದೊಳು ಹೇಸದೆ ಹೆಣನಾಗಿ ।
ಮೋಸದಿ ಬಿದ್ದು ಘಾಸಿಯಾದೆನು ಗುರುವೆ ।
ಶಾಶ್ವಿತ ಸಿದ್ಧ ದಯವಾಗು ॥ ೧೦ ॥

ಆಶೆಯ ದಾಸನಿಗೆ ವೇಷದ ಚೋರನಿಗೆ ।
ಭಾಷೆಯ ಹೀನನಿಗೆ ದಾಸ್ಯಕ್ಕೀಡಾದವಗೆ ।
ಗೌಸಾಲ ಸಿದ್ಧ ದಯವಾಗು ॥ ೧೧ ॥

ಒಂದೊಂದು ಬಯಸುವ ಸಂದೇಹ ನರನಿಗೆ ।
ಮಂದಮತಿಗಳನು ಹಿಂದುಗಳದೆನ್ನ ಗುರು ।
ತಂದೆ ಸಿದ್ಧೇಶ ದಯವಾಗು ॥ ೧೨ ॥

ಕೋಟಿ ಗೀತವ ಹಾಡಿ ಕೋಟಿ ಶಾಸ್ತ್ರವ ಕೇಳಿ ।
ಕೊಟ್ಟಮನ ತನ್ನ ಹಟವನು ಬಿಡದು ಶಶಿ ।
ಜೂಟ ಸಿದ್ಧ ದಯವಾಗು ॥ ೧೩ ॥

ಹಾಲೆರೆಯಲು ಹಾವಿಗೆ ಮೇಲೆ ವಿಷವರ್ಧನವು ।
ಲೀಲೆಯಿಂದೆನಗೆ ಬೋಧಿಸಲು ಆದರಂತೆ ।
ಕಾಲಹರ ಸಿದ್ಧ ದಯವಾಗು ॥ ೧೪ ॥

ಹೆಂಗಳಂಗದ ಭಂಗಿ ಹಿಂಗದೆ ತಲೆಗೇರಿ ।
ಲಿಂಗವನೆ ಮರೆದು ಭಂಗಬಡುತಿಹೆನು ।
ಮಂಗಳಮಯಸಿದ್ಧ ದಯವಾಗು ॥ ೧೫ ॥

ಖುಲ್ಲ ಸತಿಯರು ತಮ್ಮ ಲಲ್ಲೆ ಮಾತುಗಳಿಂದ ।
ನಿಲ್ಲದೆ ಯನ್ನ ಕೊಲ್ಲುತಲಿರ್ಪರು ।
ಸಲ್ಲಲಿತ ಸಿದ್ಧ ದಯವಾಗು ॥ ೧೬ ॥

ಸತಿಯಾಗಿ ಸುತರಾಗಿ ಹಿತವಪ್ಪ ತಾಯಾಗಿ ।
ಅತಿಮೋಹದಿಂದ ಹತಮಾಡುತಿದೆ ಮಾಯಿ ।
ಶಿತಿಕಂಠ ಸಿದ್ಧ ದಯವಾಗು ॥ ೧೭ ॥

ಏತ ತಲಿಬಾಗಿದರೆ ಓತು ಗುರುಭಕ್ತನೆ ।
ಆತೆರನಂತೆ ಯನ್ನಿರವು ಸಿದ್ಧೇಶ ।
ನೀತಿಹೀನನಿಗೆ ದಯವಾಗು ॥ ೧೮ ॥

ಇಕ್ಕಳ ಕೈಮುಗಿಯೆ ವಕ್ಕುವದೇ ಭೃತ್ಯತ್ವ ।
ಠಕ್ಕು ಮಾನವಗೆ ಸಿಕ್ಕುವದೆ ನಿಜಮುಕ್ತಿ ।
ಮುಕ್ಕಣ್ಣ ಸಿದ್ಧ ದಯವಾಗು ॥ ೧೯ ॥

ನವಿಲಾಡಿ ಫಲವೇನು ಶಿವಭಕ್ತಿ ಇಲ್ಲದೆ ।
ಅವುಗಳತೆರದಿ ಯನ್ನ ನಡೆ ಸಿದ್ಧೇಶ ।
ರವಿಕೋಟಿ ತೇಜ ದಯವಾಗು ॥ ೨೦ ॥

ವರಕರಿಗೆ ಸೂಕರ ಸರಿಯಾಗಲರಿಯದು ।
ಹರಶರಣರಡಿಗೆ ನರದೇಹಿ ಸರಿಯೇ ।
ಗುರು ಸಿದ್ಧಲಿಂಗ ದಯವಾಗು ॥ ೨೧ ॥

ರಾಜಿಪ ರತ್ನಕ್ಕೆ ಗಾಜಿನಮಣಿ ಸರಿಯೆ ।
ಮೂಜಗದೊಳಗೆ ಶರಣರಿಗೆ ನಾಸರಿಯೆ ।
ರಾಜಗುರು ಸಿದ್ಧ ದಯವಾಗು ॥ ೨೨ ॥

ಸಲೆ ಕಲ್ಪತರುವಿಂಗೆ ನಿಲುವಾದ ಮರಸರಿಯೆ ।
ಮಲಹರನೆ ನಿಮ್ಮ ಶರಣರಿಗೆ ನಾ ಸರಿಯೆ ।
ಚಲುವ ಗುರು ಸಿದ್ಧ ದಯವಾಗು ॥ ೨೩ ॥

ಪರುಷಕ್ಕೆ ಪಾಷಾಣ ಸರಿಯಾಗಲಪ್ಪುದೆ ।
ಹರಶರಣರಡಿಯ ಇರವಿಂಗೆ ನಾ ಸರಿಯೆ ।
ಚರಲಿಂಗ ಸಿದ್ಧ ದಯವಾಗು ॥ ೨೪ ॥

ಏಳೇಳು ಜನ್ಮದೊಳು ಭಾಳಲೋಚನ ನಿಮ್ಮ ।
ಆಳಿನಾಳಾಗೆ ಬಾಳುವ ಭಕ್ತಿಗೆ ಮೇಳಾದ ।
ಸಿದ್ಧ ದಯವಾಗು ॥ ೨೫ ॥

ಅಚ್ಚ ಶರಣರ ಮನೆಯ ಬಚ್ಚಲ ಕಲ್ಲಾಗಿ ।
ನಿಚ್ಚ ಮೆಟ್ಟುವರ ಪಾದುಕೆಯನಾಗಿರುವ ।
ಇಚ್ಛೆಯನಿತ್ತು ದಯವಾಗು ॥ ೨೬ ॥

ದಮ್ಮಯ್ಯ ದಯವಾಗು ನಮ್ಮಯ್ಯ ದಯವಾಗು ।
ನಿಮ್ಮಡಿಯ ಪಡುವ ಪಾದುಕ ಪಿಡಿದಿರುವೆ ।
ಪೇರ್ಮೆಯ ಸಿದ್ಧ ದಯವಾಗು ॥ ೨೭ ॥

ಮೇರು ಕಾಗೆಯ ಗುಣನಾವರ್ಯೆದು ನೋಡುವದೆ ।
ಮಾರಾರಿ ಯನ್ನ ಅವಗುಣವ ನೋಡದೆ ।
ಧೀರ ಗುರು ಸಿದ್ಧ ದಯವಾಗು ॥ ೨೮ ॥

ಹತ್ತಿ ಹಣ್ಣಿನೊಳಗೆ ಉತ್ತಮವನರಸುವರೆ ।
ಮತ್ತ ಮಾನವನ ಅವಗುಣವ ನೋಡದೆ ।
ಬಿತ್ತರಿಸಿ ಸಿದ್ಧ ದಯವಾಗು ॥ ೨೯ ॥

ತರುಮರದ ಗುಣಗಳನು ಶ್ರೀ ಗಂಧನೋಡುವದೆ ।
ವರಗುರು ಯನ್ನ ಅವಗುಣ ನೋಡದೆ ।
ಕರುಣದಿ ಸಿದ್ಧ ದಯವಾಗು ॥ ೩೦ ॥

ಅಯ್ಯೋ ಗುರುರಾಯನೆ ಹುಯ್ಯಲಿಟ್ಟೆನು ನಿಮ್ಮ ।
ಓಯನ್ನದಿರ್ದಡೆ ಸಾಯದಿರಲಾರೆ ।
ಮಾಯಾರಿ ಸಿದ್ಧ ದಯವಾಗು ॥ ೩೧ ॥

ಹುಟ್ಟುಗುರುಡಗೆ ಕೋಲು ಕೊಟ್ಟು ಸೆಳಕೊಂಬುವರೆ ।
ಮುಟ್ಟಿ ಅಭಯವನು ಕೊಟ್ಟು ಕೈ ಬಿಟ್ಟರೆ ।
ಕೆಟ್ಟೆ ನಾ ಸಿದ್ಧ ದಯವಾಗು ॥ ೩೨ ॥

ಎಷ್ಟು ಓದಿದಡೇನು ಎಷ್ಟು ಹಾಡಿದರೇನು ।
ನಷ್ಟಮನ ನಿಮ್ಮ ನೆನೆಯದು ।
ಶ್ರೇಷ್ಠ ಗುಗು ಸಿದ್ಧ ದಯವಾಗು ॥ ೩೩ ॥

ಗುರುವೆ ನಿಮ್ಮನು ಮರೆದು ನರಕದೊಳಗೆ ಬಿದ್ದು ।
ದುರುಳತನದಿಂದ ಹೊರಳುವ ಪಾಪಿಗೆ ।
ಕರುಣದಿ ಸಿದ್ಧ ದಯವಾಗು ॥ ೩೪ ॥

ಜಯಗುರುವೆ ಸುರತರುವೆ ಜಯ ಸತ್ಯ ಸಾಗರವೆ ।
ಜಯ ಪಂಚ ಪರುಷದ ಖಣಿಯೆ ।
ಜಯತು ಚಿಂತಾಮಣಿಯೆ ಜಯತು ಸಿದ್ಧೇಶ ದಯವಾಗು ॥೩೫॥

## :: ಶುದ್ಧಾಶುದ್ಧ ಪತ್ರಿಕೆ ::

| ಪುಟ | ಪಂಕ್ತಿ | ಶುದ್ಧ | ಅಶುದ್ಧ |
|---|---|---|---|
| ೯ | ೧೬ | ನೀರಾನೆ | ನಿರಾನೆ |
| ೨೯ | ೮ | ಬಹಳಾಗೆ | ಬಹಳಾಗ |
| ೩೨ | ೧೫ | ಕಟ್ಟಳಿಲ್ಲ | ಕೆಟ್ಟಳಿಲ್ಲ |
| ೩೨ | ೧೯ | ನಿಡಿಸಿ | ನಿಡಿಸು |
| ೬೭ | ೭ | ಮಾಗದೆ | ಮಾಗೆದೆ |
| ೪೧ | ೨೬ | ಫಲವು | ಫಲಪು |
| ೪೫ | ೧ | ಐದನೆಯ | ಆರನೇಯ |
| ೪೫ | ೨೧ | ಗೀಗ | ಗಿಗ |
| ೪೮ | ೧೫ | ಶೀತೋಷ್ಣಾದಿ | ಶಿತೊಷ್ಣಾದಿ |
| ೪೯ | ೧೦ | ಬ್ರಹ್ಮನೆ | ಬಹ್ಮನೆ |
| ೫೦ | ೬ | ಯೇಕ | ಯೆಕ |
| ೫೨ | ೧೨ | ಸಿದ್ಧೇಂದ್ರ | ಸಿದ್ಧೆಂದ್ರ |
| ೫೨ | ೧೫ | ತಿಳುಪುವೆ | ತಿಳುಪುವೆ |
| ೫೭ | ೨ | ಪ್ರೀತಿ | ಪ್ರೀತೆ |
| ೭೬ | ೨೬ | ಇರುವು | ಯರವು |
| ೭೪ | ೧೫ | ನೀಕ್ಷಿಸಲು | ನಿಕ್ಷಿಸಲು |
| ೯೨ | ೬ | ಸಮನಿಸದೇ | ಸಮನಿಸದೊ |
| ೯೨ | ೨೪ | ದೆನಿಸುವದು | ದೆನಿಸುವವುದು |
| ೧೦೧ | ೭ | ದಿರುತಿಹ | ತಿರುತಿಹ |
| ೧೦೬ | ೩ | ಓರ್ವನಿಗೆ | ತೋರ್ವನಿಗೆ |
| ೧೦೭ | ೬ | ದೆಂದ | ದೆನ್ನ |
| ೧೦೮ | ೯ | ನೀಯು | ನೀಹು |
| ೧೧೬ | ೨ | ನಿಮುಗಾದಿ | ಗಾದಿ |
| ೧೨೧ | ೧೧ | ಯಿಂದಂ | ಯಂದಂ |
| ೧೨೨ | ೨೧ | ವಿಸ್ತರಿಸಿ | ವಿಸರಿಸಿ |

| ಪುಟ | ಪಂಕ್ತಿ | ಶುದ್ಧ | ಅಶುದ್ಧ |
|---|---|---|---|
| ೧೨೫ | ೧ | ನಲ | ನಲ್ |
| ೧೩೦ | ೧೭ | ಚರಿಸಿ | ಚರಿಸಾ |
| ೧೩೬ | ೮ | ವಿರಸವ | ವಿರವಸ |
| ೧೩೮ | ೧೫ | ಸ್ತುತಿಸಿ | ಸ್ತತಿಸಿ |
| ೧೪೫ | ೧೧ | ಗುರುಸಿದ್ಧ | ಗುರಸಿದ್ಧ |
| ೧೪೬ | ೧೪ | ಸಂಶಯವ | ಸಂಶಯನ |
| ೧೫೧ | ೧೮ | ದೇಹದಿ | ದೇಹದಿ |
| ೧೬೫ | ೨೦ | ನೋಡುತ | ನೇಡುತ |
| ೧೭೮ | ೧೩ | ಮುಖ್ಯಾಂಶ | ಮುಖಾಂಶ |
| ೧೮೪ | ೯ | ಕೊಂಡಿರುವ | ಕೊಂಡಿರವ |

ಪೀಠಿಕಾ ಸಂಧಿಯನ್ನು ಬಿಟ್ಟು ಉಳಿದ ಎಲ್ಲಾ ಸಂಧಿಗಳ ಕಡೆಯ ಪದ್ಯದಲ್ಲಿ
ಚಿರತರಾಯುರರೋಗ್ಯವೈಸಿರಿ ಎಂಬುದನ್ನು
ಚಿರತರಾಯುರರೋಗವೈಸಿರಿ ಎಂದು ತಿದ್ದಿಕೊಳ್ಳತಕ್ಕದ್ದು.

# ಶ್ರೀ ಕೋರಿ ಸಿದ್ಧೇಶ್ವರ ಪುರಾಣ ಪ್ರಿಂಟಿನಸಲುವಾಗಿ

## ಧನಸಹಾಯ ಮಾಡಿದವರ ಹೆಸರು

| ರೂ. ಗಳು | | |
|---|---|---|
| ೪೦೧ | ಶ್ರೀ | ಗುರಣ್ಣಗೌಡ ಬಾಸರಡ್ಡಿ ನಾಲ್ವಾರ |
| ೩೦೧ | ,, | ಗುರಪ್ಪಗೌಡ ಇಟಗಿ ,, |
| ೨೦೧ | ,, | ಶಿದ್ದರಾಜ ಮಾಲಿಪಾಟಿಲ ,, |
| ೨೦೧ | ,, | ಸೂಗಣ್ಣಗೌಡ ಪೋಲೀಸಪಾಟೀಲ ನಾಲ್ವಾರ |
| ೨೦೧ | ,, | ಶರಣಗೌಡ ಕರಡ್ಡಿ ನಾಲ್ವಾರ |
| ೧೦೧ | ,, | ತಮ್ಮಣ್ಣಪ್ಪಗೌಡ ಮಾಡ್ಗಿ ನಾಲ್ವಾರ |
| ೧೦೧ | ,, | ಸಂಗಣ್ಣ ಸಾಹು ವೊಟ್ಗಿ ನಾಲ್ವಾರ |
| ೧೦೧ | ,, | ಶರಣಪ್ಪ ಸಾಹು ಮಾಕಲ್ ನಾಲ್ವಾರ |
| ೧೦೧ | ,, | ಮದನಲಾಲಜಿ ತೋಶನವಾಳ ನಾಲ್ವಾರ |
| ೧೦೧ | ,, | ಯಂಕಣ್ಣಗೌಡ ಬೊಮ್ಮಾಣಿ |
| ೧೦೧ | ,, | ಸಂಗಪ್ಪ ಪೊರಡ್ಡಿ ನಾಲ್ವಾರ |
| ೧೦೧ | ,, | ಅಯ್ಯಪ್ಪಗೌಡ ಹೊತಪೇಟಿ ನಾಲ್ವಾರ |
| ೭೫ | ,, | ನಾರಾಯಣರಾವ ಪಟವಾರಿ ನಾಲ್ವಾರ |
| ೫೧ | ,, | ರಾಚೋಟೆಪ್ಪ ಸುಗ್ನಾನಿ ನಾಲ್ವಾರ |
| ೫೧ | ,, | ಮಲ್ಲರಡ್ಡೆಪ್ಪಗೌಡ ಸೋಮರಡ್ಡಿ ನಾಲ್ವಾರ |
| ೫೧ | ,, | ಹನುಮಾನ ಶೆಟಜಿ ಬಜಾಜ ನಾಲ್ವಾರ |
| ೫೧ | ,, | ನಾಗಪ್ಪ ಹಿರವೆ ನಾಲ್ವಾರ |
| ೫೧ | ,, | ಬಸಣ್ಣ ಯಣ್ಣಿ ನಾಲ್ವಾರ |
| ೫೧ | ,, | ಅಮರಪ್ಪ ಲಾಡ್ಲಾಪೂರ ನಾಲ್ವಾರ |
| ೫೧ | ,, | ಶಿದ್ರಾಮರಡ್ಡೆಪ್ಪ ಹರಸರಡ್ಡಿ ನಾಲ್ವಾರ |
| ೫೧ | ,, | ಶಿದ್ದಣ್ಣ ಭೀಮಣ್ಣ ಅಲ್ಲೂರಕರ ನಾಲ್ವಾರ |
| ೩೧ | ,, | ಬೋಳಾರಾಮು ಶೆಟಜಿ ಬಜಾಜ ನಾಲ್ವಾರ |
| ೨೫ | ,, | ಬಸವರಾಜಪ್ಪ ಅಲ್ಲಮು ನಾಲ್ವಾರ |
| ೨೫ | ,, | ಡಾಕ್ಟರ ಬಿ. ಕೆ. ಸ್ಯಾಟಿ ನಾಲ್ವಾರ |
| ೨೫ | ,, | ರಾಮರಾವ ತಿರಮಲ್ಲರಾವ ಪಟವಾರಿ ನಾಲ್ವಾರ |

ರೂ. ಗಳು

೩೫ ,, ಶಿದ್ದಣ್ಣ ಬನ್ನಪ್ಪ ಪಡಶೆಟ್ಟಿ ನಾಲ್ವಾರ
೩೫ ,, ಮಾಹಾವೇವಪ್ಪ ಆರಿ ನಾಲ್ವಾರ
೩೫ ,, ಗೋಬಸಪ್ಪ ಸಜ್ಜನಶೆಟ್ಟಿ ನಾಲ್ವಾರ
೩೫ ,, ತಿಪ್ಪಣ್ಣ ದಿಬ್ಬಾ ನಾಲ್ವಾರ
೧೫ ,, ಬಾಲಕಿಶನ್ ಸೋನಿ ನಾಲ್ವಾರ
೧೧ ,, ರಾಮಾಕಿಶನ್ ಬಜಾಜ ನಾಲ್ವಾರ
೧೧ ,, ಚೇಂದ್ರಶೇಖರ ಸಜ್ಜನಶೆಟ್ಟಿ ನಾಲ್ವಾರ
೧೧ ,, ಬಾಲದಂಡಪ್ಪ ಇಂಗಳಿಗಿ
೧೧ ,, ಶಿದ್ದಣ್ಣ ಶರಣಪ್ಪ ಇಂಗಳಗಿ ನಾಲ್ವಾರ
೧೧ ,, ಮಲ್ಕಪ್ಪ ಆರಿ ನಾಲ್ವಾರ
೧೧ ,, ಶರಣಪ್ಪ ಪರಸರಡ್ಡಿ ನಾಲ್ವಾರ
೧೧ ,, ಬಸಪ್ಪ ಸುಣಗಾರ ನಾಲ್ವಾರ
೧೧ ,, ಮಹಾದೇವಪ್ಪ ಇಂಗಳಗಿ ನಾಲ್ವಾರ
೧೧ ,, ಶಿದ್ಲಿಂಗಪ್ಪ ನಿಂಬೆಣಗೋಳ ನಾಲ್ವಾರ
೧೧ ,, ಚಂದ್ರಾಮ ಸಂಗಪ್ಪ ಸಂಗಮಾ ನಾಲ್ವಾರ
೧೧ ,, ಮಲ್ಲಪ್ಪ ಸಾಬಣ್ಣ ಸುಗ್ಗಾ
೧೧ ,, ಮರೆಪ್ಪ ಮಲ್ಲಪ್ಪ ಮಳಬೊ

## ಪುರಾಣ ದೊರೆಯುವ ಸ್ಥಳ:

ಅಧ್ಯಕ್ಷರು:

1) ಶ್ರೀ ಸಿದ್ಧಯ್ಯಸ್ವಾಮಿ ಮುನೆಯ್ಯಗೋಳ
ಶ್ರೀ ಕೋರಿ ಸಿದ್ಧೇಶ್ವರ ಟ್ರಸ್ಟಕಮೀಟಿ, ನಾಲ್ವಾರ
P. O ನಾಲ್ವಾರ ಜಿಲ್ಲಾ: ಗುಲ್ಬರ್ಗಾ

ಉಪಾಧ್ಯಕ್ಷರು:

2) ಗುರನಗೌಡ ಬಾಸರಡ್ಡಿ
ಶ್ರೀ ಕೋರಿ ಸಿದ್ದೇಶ್ವರ ಟ್ರಸ್ಟಕಮೀಟಿ, ನಾಲ್ವಾರ
P. O. ನಾಲ್ವಾರ ಜಿಲ್ಲಾ: ಗುಲ್ಬರ್ಗಾ

ಕೋಶಾಧ್ಯಕ್ಷರು:

3) ಬಸಣ್ಣ ಸಾಹುಕಾರ ಇಟಗಿ
P. O. ನಾಲ್ವಾರ ಜಿಲ್ಲಾ: ಗುಲ್ಬರ್ಗಾ

ಸೆಕ್ರೆಟರಿ:

4) Dr B. K. ಪ್ಯಾಟಿ ಪೋಷ್ಟ: ನಾಲ್ವಾರ
ತಾಲೂಕ: ಚಿತಾಪೂರ ಜಿಲ್ಲಾ: ಗುಲ್ಬರ್ಗಾ

5) ಮಸ್ಕಿ ಕುನ್ನುಟಿಗಿ ಮಠದ ದೇಶಿಕ ಗಂಗಾಧರಸ್ವಾಮಿಗಳು
ಚೌಕಿಮಠ ಪೋಷ್ಟ: ಆದವಾನಿ

6) M. K. M. ದೇಶಿಕ ಗಂಗಾಧರ ಸ್ವಾಮಿಗಳು
*P*. O. ಮಸ್ಕಿ Tq: ಲಿಂಗಸೂಗೂರ ಜಿಲ್ಲಾ: ರಾಯಚೂರ